

ಸಿಂಹಳ ಭಾಷೆಯ

## ಚಂದಮಾಮ

**ಬಿಡುಗಡೆಯ ಸಂದರ್ಭದಲ್ಲಿ**

## ಪ್ರಧಾನ ಮಂತ್ರಿಯವರ ಸಂದೇಶ

ಭಾರತದ ಬಾಲಬಾಲಿಕೆಯರಿಗೆ ಸ್ವಚ್ಛವಾದ ಉತ್ತಮ ವಿನೋದವನ್ನು ಅಳವಡಿಸಿಕೊಡುವ ಚಂದಮಾಮ ಪಬ್ಲಿಕೇಷನ್ಸ್ ಸಂಸ್ಥೆಯವರು ಎಳೆಯರ ಹೃದಯಗಳಲ್ಲೊಂದು ಸ್ಥಾನ ಏರ್ಪಡಿಸಿಕೊಂಡಿದೆ. ಅವರು ಈಗ ಈ ಉದ್ಯಮವನ್ನು ಶ್ರೀಲಂಕಾವರೆಗೆ ವಿಸ್ತರಿಸಿಕೊಂಡಿರುವುದು ನನಗೆ ಸಂತೋಷವನ್ನುಂಟು ಮಾಡಿದೆ.

ಈ ನೂತನ ಪ್ರಯತ್ನಕ್ಕಾಗಿ ಅವರನ್ನು ಅಭಿನಂದಿಸುತ್ತ, ಅದು ಭಾರತದೇಶದಲ್ಲಿರುವ ಹಾಗೆಯೇ ಸಿಂಹಳದ ಬಾಲ ಬಾಲಿಕೆಯರಿಗೆ ಕೂಡ ಆಮೋದವನ್ನುಂಟು ಮಾಡುವುದೆಂದು ನಂಬುವೆನು.

ನ್ಯೂ ಢಿಲ್ಲಿ
ಜೂನ್ ೩, ೧೯೭೮

ಮೊರಾರ್ಜೀ ದೇಸಾಯಿ

# ಚಂದಮಾಮ

ಸಂಸ್ಥಾಪಕರು: 'ಚಕ್ರಪಾಣಿ'

ಸಂಚಾಲಕರು: ನಾಗಿರೆಡ್ಡಿ

ಈ ತಿಂಗಳಿನಿಂದ ಕಥಾ ಶೀರ್ಷಿಕೆಯ ಸ್ಪರ್ಧೆಯನ್ನು ಪ್ರಕಟಿಸುವುದಿಲ್ಲ. ಸೆಪ್ಟೆಂಬರ್ ತಿಂಗಳಿನ ಕಥಾ ಶೀರ್ಷಿಕೆಯ ಸ್ಪರ್ಧೆಯ ಫಲಿತಾಂಶವನ್ನು ಈ ಕೆಳಗೆ ಕೊಟ್ಟಿದ್ದೇವೆ. ಈ ಬಹುಮಾನ ಈ ತಿಂಗಳಿನಲ್ಲಿ ಕಳುಹಿಸಲಾಗುತ್ತದೆ.

ಗದ್ದ ಹೆಸರು: ಭ್ರಮಪ್ರಮಾದ ಪ್ರಹಸನ

ಕಳುಹಿಸಿದವರು: ಶ್ರೀ. ಸುಮತಿ, ಕುಳ್ಯಾ ಹೊಸಬೆಟ್ಟು

## ಅಮರವಾಣಿ

ಮಿತಂ ದದಾತಿ ಹಿ ಪಿತಾ<br>
ಮಿತಂ ಮಾತಾ ಮಿತಂ ಸುತಃ<br>
ಅಮಿತಸ್ಯಹಿ ದಾತಾರಂ<br>
ಭರ್ತಾರಂ ಕಾ ನ ಪೂಜಯೇತ್ ೧.

[ತಂದೆ, ತಾಯಿ, ಮಂಗಂದಿರು ಕೊಡುವುದಕ್ಕೆ ಒಂದು ಪರಿಮಿತಿ ಇರುತ್ತದೆ. ಆದರೆ ಗಂಡನು ಕೊಡುವುದಕ್ಕೆ ಪರಿಮಿತಿಯಿಲ್ಲ. ಅಂತಹ ಗಂಡನನ್ನು ಏಕೆ ಪೂಜಿಸಬಾರದು ?]

ಸಂಪುಟ: ೬೧ ನವಂಬರ್ '೭೮ ಸಂಚಿಕೆ: ೫

ಬಿಡಿ ಪ್ರತಿ ರೂ. ೧-೨೫ :: ವಾರ್ಷಿಕ ಚಂದಾ ರೂ. ೧೫-೦೦






**ರಬೀಂದರ್‌ಕುಮಾರ್ ಬೇಹರಾ, ಕಟಕ್ (ಒರಿಸ್ಸಾ)**

ಪ್ರ: ಬೇತಾಳ ಕಥೆಗಳು ನಿಜವೇ? ಇತಿಹಾಸಗಳನ್ನು ಚರಿತ್ರೆಯಾಗಿ ಪರಿಗಣಿಸಬಹುದೆ?

ಉ: ಬೇತಾಳ ಕಥೆಗಳು ಕಲ್ಪಿತಗಳು. ಪೂರ್ವದ ಕಲ್ಪನೆ ಕಥೆ ಇಪ್ಪತ್ತೈದು ಮಾತ್ರ. ಅವನ್ನು 'ಬೇತಾಳ ಪಂಚ ವಿಂಶತಿ' ಅನ್ನುವರು. ಚಂದಮಾಮದಲ್ಲಿ ಬರುವ ನೂರಾರು ಬೇತಾಳ ಕಥೆಗಳು ಆಧುನಿಕ ಕಲ್ಪನೆಗಳು.

ಇತಿಹಾಸಗಳು ಬಗೆಬಗೆಯಾಗಿ ಏರ್ಪಡುತ್ತವೆ. ಕೆಲವು ಚಾರಿತ್ರಿಕ ಸಂಘಟನೆಗಳು ಕಾಲಕ್ರಮದಲ್ಲಿ ಕಟ್ಟುಕಥೆಗಳಂತಾಗುತ್ತವೆ. ಇಂತಹ ಕಥೆಗಳಲ್ಲಿ ಸೂಕ್ಷ್ಮವಾದ ಚರಿತ್ರಾಂಶವಿರುತ್ತದೆ. ಕೆಲವು ಚರಿತ್ರ ಪ್ರಸಿದ್ಧರನ್ನು ಕುರಿತು ಕಲ್ಪನೆಗಳು ಪ್ರಚಾರವಾಗುತ್ತವೆ. ಬೀರ್ಬಲ್, ತೆನಾಲಿ ರಾಮಲಿಂಗ, ಮಹಾಮಂತ್ರಿ ತಿಮ್ಮರಸು ಮೊದಲಾದವರು ಪ್ರಪಂಚದಲ್ಲೆಲ್ಲಾ ಕಟ್ಟುಕಥೆಗಳಿಗೆ ಆಧಾರವಾಗಿ ಉಪಯೋಗವಾದರು. ಇವುಗಳಲ್ಲಿ ಯುಕ್ತಿ, ಹಾಸ್ಯಗಳು ಮುಖ್ಯವಾಗಿರುತ್ತವೆ. ಆದರೆ ಇವು ನಿಜವಲ್ಲ. ಯಾವುದೋ ಒಂದು ನೀತಿಯನ್ನೋ, ಧರ್ಮ ಸೂಕ್ಷ್ಮವನ್ನೋ, ಜೀವನದ ಸತ್ಯವನ್ನೋ ನಿರೂಪಿಸಲು ಅನೇಕ ಕಟ್ಟುಕಥೆಗಳು ಹುಟ್ಟಿದುವು. ಇವುಗಳಲ್ಲಿ "ನಿಜ" ವೇ ಬೇರೆ.

**ಜಿ. ರಮಣರೆಡ್ಡಿ, ವೆಲ್ಲಲಕುಪ್ಪಂ (ಆಂಧ್ರ)**

ಪ್ರ: ಚಂದ್ರನ ನೆರಳು ಭೂಮಿಯ ಮೇಲೆ ಬಿದ್ದರೆ ಅದು ಸೂರ್ಯ ಗ್ರಹಣ ಹೇಗಾಗುತ್ತದೆ?

ಉ: ಸೂರ್ಯ ಕಾಂತಿಗೆ ಚಂದ್ರನು ಅಡ್ಡ ಬಂದು, ಚಂದ್ರನ ನೆರಳು ಭೂಮಿಗೆ ಬಿದ್ದಾಗ ಆ ನೆರಳಿನ ಪ್ರಾಂತದಲ್ಲಿರುವವರಿಗೆ ಸೂರ್ಯ ಕಾಣುವುದಿಲ್ಲ. ಆದುದರಿಂದ ಅದು ಸೂರ್ಯ ಗ್ರಹಣ. "ಗ್ರಹಣ" ಎಂದರೆ ಹಿಡಿಯುವುದು ಎಂಬ ಅರ್ಥವು ಸೂರ್ಯ ಗ್ರಹಣ, ಚಂದ್ರ ಗ್ರಹಣಗಳಿಗೆ ವರ್ತಿಸುವುದದಿಲ್ಲ.

**ವೈ. ಸತ್ಯನಾರಾಯಣ, ಚಿಲಂಪಲ್ಲಿ (ಆಂಧ್ರ)**

ಪ್ರ: ಕಷ್ಟಪಟ್ಟರೇನೇ ಫಲ ಎನ್ನುತ್ತಾರೆ. ಕಷ್ಟಪಟ್ಟು ಕೆಲಸ ಮಾಡುವವರಿಗಿಂತ, ಬಂಡವಳು ಹಾಕಿ ಮನೆಯಲ್ಲಿ ಕುಳಿತವರಿಗೇ ಹೆಚ್ಚಿನ ಫಲ ಬರುತ್ತದಷ್ಟೆ? ಇದು ಎಂತಹ ಫಲ?

ಉ: ಶರೀರಶ್ರಮ ಮಾಡುವವರೊಂದಿಗೆ ಮೂಲಧನ ಹಾಕುವವರನ್ನು ಹೋಲಿಸಿ ಏನು ಪ್ರಯೋಜನ? ಯಾವ ರಂಗದಲ್ಲೇ ಆದರೂ ಕಷ್ಟಪಟ್ಟಷ್ಟೇ ಫಲಿತವಿರುತ್ತದೆ. ಮೂಲಧನ ಹಾಕುವವರಾದರೂ ಮನೆಯಲ್ಲಿ ಕುಳಿತಿರದೆ ಕಷ್ಟಪಟ್ಟನೇರೇ ಹೆಚ್ಚಿಗೆ ಲಾಭ ಗಳಿಸುವರು.




## ೬೪

ಗಂಗಾದತ್ತ ಕಪ್ಪೆಯಿಂದ ಹಾವನ್ನು ಏನು ಮಾಡಲಿಕ್ಕೂ ಸಾಧ್ಯವಾಗಲಿಲ್ಲ. ಹಾವು ತನಗಿಷ್ಟಬಂದಂತೆ ಸಿಕ್ಕಿದ ಕಪ್ಪೆಗಳನ್ನು ಹಿಡಿಹಿಡಿದು ನುಂಗುತ್ತಾ ಒಂದು ದಿನ ಗಂಗಾದತ್ತ ಕಪ್ಪೆಯ ಮಗ ಪಿತೃದತ್ತ ಕಪ್ಪೆಯನ್ನು ಹಿಡಿದು ನುಂಗಿಬಿಟ್ಟಿತು.

ಇದನ್ನು ತಿಳಿದು ಗಂಗಾದತ್ತ ಕಪ್ಪೆ, "ಅಯ್ಯೋ ! ಅಯ್ಯೋ !" ಎಂದು ಆಕ್ರಂದನ ಮಾಡುತ್ತಿರಲು, ಅದರ ಹೆಂಡತಿ ಕಪ್ಪೆ, "ಕಲ್ಮನಸ್ಸಿನ ನನ್ನ ಗಂಡನೇ ! ಈಗ ಅತ್ತರೆ ಏನು ಲಾಭ ? ನಿನ್ನ ಜಾತಿಯನ್ನು ನೀನೇ ನಾಶಮಾಡಿಕೊಂಡೆ. ಈಗ ನಮ್ಮನ್ನು ರಕ್ಷಿಸಲು ಯಾರು ಬರುತ್ತಾರೆ ? ಮೂಢನೇ ! ಈಗಲಾದರೂ ಈ ಮಹಾ ನರಕದಿಂದ ಹೊರಬೀಳುವ ಮಾರ್ಗವನ್ನೋ, ಅಥವಾ ಈ ಕ್ರೂರಸರ್ಪವನ್ನು ಕೊಲ್ಲುವ ಉಪಾಯವನ್ನೋ ಆಲೋಚನೆ ಮಾಡು" ಎಂದು ಹೇಳಿತು.

ಗಂಗಾದತ್ತ ಕಪ್ಪೆಗೆ ಏನೂ ತೋರಲಿಲ್ಲ. ಅಂತೂ ಇಂತೂ ಕಡೆಗೆ ಅದರ ಕಣ್ಣೆದಿರೇ ಎಲ್ಲಾ ಕಪ್ಪೆಗಳೂ ಹೋಗಿ, ಗಂಗಾದತ್ತ ಒಂದೇ ಉಳಿಯಿತು.

ಆಗ ಹಾವು "ಏನೆಲೋ ಗಂಗಾದತ್ತಾ, ನನಗೆ ಹಸಿವಾಗುತ್ತಾ ಇದೆ. ಎಲ್ಲಾ ಕಪ್ಪೆಗಳು ತೀರಿಹೋದುವು. ನೀನು ನನ್ನನ್ನು ಇಲ್ಲಿಗೆ ಕರೆ ತಂದುದಕ್ಕಾಗಿ ನನಗೆ ತಿನ್ನಲು ಈಗ ಏನಾದರೂ ಕೊಡಲೇಬೇಕು. ಅದು ನಿನ್ನ ಕರ್ತವ್ಯ, ಏನು ತಿನ್ನಲಿ ಬೇಗ ಹೇಳು." ಎಂದಿತು ಜೋರಿನಿಂದ.

ಅದಕ್ಕೆ ಕಪ್ಪೆರಾಜ, "ಮಿತ್ರನೇ, ನಾನು ಬದುಕಿರುವಾಗ ನೀನು ಚಿಂತಿಸಬೇಕಾಗಿಲ್ಲ. ನನ್ನನ್ನು ನೀನು ಇನ್ನೊಂದು ಕೆರೆಗಾಗಲೀ, ಬಾವಿಗಾಗಲೀ ಹೋಗಲು ಬಿಟ್ಟರೆ ಇನ್ನೂ ಕೆಲವು ಕಪ್ಪೆಗಳು ಇಲ್ಲಿಗೆ ಬರುವ ಹಾಗೆ ಮಾಡುತ್ತೇನೆ. ನಿನಗೆ ಬೇಕಾದಷ್ಟು ಆಹಾರ ಸಿಗುತ್ತದೆ. ಹೋಗಿ ಬರಲೇ ? ಬೇಗ ಬಂದುಬಿಡುತ್ತೇನೆ" ಎಂದಿತು.

"ಗಂಗಾದತ್ತಾ, ನೀನು ನನಗೆ ಸೋದರನಂಥವನು. ಆದುದರಿಂದ ನಾನು ನಿನ್ನನ್ನು ತಿನ್ನಬಾರದು. ನೀನು ಹೇಳಿದ ಹಾಗೆ ಮಾಡಿದೆಯಾದರೆ ನನಗೆ ತಂದೆಗೆ ಸಮಾನನಾಗುವೆ. ಆದುದರಿಂದ ನೀನು ಆಲೋಚಿಸುವಂತೆಯೇ ಮಾಡು. ಹೋಗಿ ಕಪ್ಪೆ



ಗಳನ್ನು ಬೇಗನೇ ಕರಕೊಂಡು ಬಾ" ಎಂದು ಹೇಳಿತು ಹಾವು. "ಹಾಗೆಯೇ ಆಗಲಿ" ಎಂದು ಹೇಳಿ ಕಪ್ಪೆರಾಜ ಬಾವಿ ಹಗ್ಗದ ಮೂಲಕ ಹೊರಗೆ ಬಂದು, ಮತ್ತೊಂದು ಬಾವಿಯನ್ನು ಸೇರಿ ಅಲ್ಲಿರುವ ಕಪ್ಪೆಗಳೊಂದಿಗೆ ಬೆರೆತು ಸುಮ್ಮನಿದ್ದಿತು.

ಪ್ರಿಯದರ್ಶನ ಹಾವು ಸ್ವಲ್ಪ ಕಾಲದವರೆಗೆ ಆ ಕಪ್ಪೆರಾಜನನ್ನು ಇದಿರುನೋಡುತ್ತಿದ್ದು, ಆಮೇಲೆ ಏನೋ ಸಂಶಯ ಪಡತೊಡಗಿತು. ಅದು ಅತ್ತಿತ್ತ ನೋಡುತ್ತಿರಲು, ಅದೇ ಬಾವಿಯ ಇನ್ನೊಂದು ಬಿಲದೊಳಗೆ ಕುಳಿತಿದ್ದ ಓತಿಯನ್ನು ನೋಡಿ, "ಮಿತ್ರನೇ, ನನಗೊಂದು ಸಣ್ಣ ಸಹಾಯಮಾಡುವೆಯಾ? ಇಲ್ಲಿಂದ ಹೋದ ಗಂಗಾದತ್ತ ಕಪ್ಪೆ ಎಲ್ಲಿರುವನೆಂದು ಹುಡುಕಿ, ಅವನೊಂದಿಗೆ 'ಬೇರೆ ಕಪ್ಪೆಗಳು ಬಾರದಿದ್ದರೆ ಬೇಡಬಿಡು, ನೀನಾದರೂ ಬೇಗ ಬಂದುಬಿಡು. ನೀನಿಲ್ಲದೆ ನಾನಿಲ್ಲಿ ಬದುಕಿರಲು ಸಾಧ್ಯವಿಲ್ಲ. ನಾನು ನಿನಗೆ ಏನೂ ಕೆಡುಕು ಮಾಡಲಾರೆ. ನಾನು ಹೇಳಿದ ಈ ಮಾತಿಗೆ ತಪ್ಪಿ ನಡೆದರೆ, ನಾನು ಇದುವರೆಗೆ ಸಂಪಾದಿಸಿದ ನನ್ನ ಪುಣ್ಯವನ್ನೆಲ್ಲಾ ನಿನಗೇ ಧಾರೆಬಿದ್ದು ಹೋಗಲಿ!' ಎಂದು ನಾನು ಹೇಳಿದ ಹಾಗೆ ಹೇಳುವೆಯಾ?" ಎಂದು ಕೇಳಿತು.

ಸರಿಯೆಂದು ಓತಿ ಅಲ್ಲಿ ಹೊರಟು, ಬೇಗದಲ್ಲೇ ಗಂಗಾದತ್ತ ಕಪ್ಪೆಯನ್ನು ನೋಡಿ "ನಿನ್ನ ಮಿತ್ರ ಪ್ರಿಯದರ್ಶನ ಹಾವು ನಿನ್ನನ್ನು ಅತ್ಯಾತುರದಿಂದ ಇದಿರುನೋಡುತ್ತಾ ಇದೆ. ಅದು ನಿನಗೇನೂ ಕೇಡು ಮಾಡುವುದಿಲ್ಲವಂತೆ. ಮಾತು ತಪ್ಪಿದರೆ ತನ್ನ ಪುಣ್ಯವನ್ನೆಲ್ಲಾ ನಿನಗೆ ಧಾರೆಯೆರೆಯುತ್ತದಂತೆ! ಆ ಪುಣ್ಯವಷ್ಟೂ ನಿನಗೇ ಅಂತೆ. ಅದರ ಹಸಿವೆಗೆ ಸಾಕಾಗುವಷ್ಟು ಕಪ್ಪೆಗಳು ಇಲ್ಲದಿದ್ದರೂ ಹೋಗಲಿ, ನೀನಾದರೂ ಬರಲೇಬೇಕಂತೆ." ಎಂದು ಹಾವು ಹೇಳಿದ ಹಾಗೇ ಹೇಳಿತು.

ಆ ಮಾತು ಕೇಳಿ ಕಪ್ಪೆ, "ಹಸಿವೆಯಲ್ಲಿರುವವನು ಎಷ್ಟು ಪಾಪಗಳನ್ನಾದರೂ ಮಾಡುತ್ತಾನೆ. ದುರ್ಬಲನ ಮೇಲೆ ಹಸಿದ ಬಲಿಷ್ಠನಿಗೆ ದಯಾದಾಕ್ಷಿಣ್ಯಗಳಿರುವುದಿಲ್ಲ. ಮಿತ್ರನೇ, ನೀನು ತಿರುಗಿಹೋಗಿ ಗಂಗಾದತ್ತ ಇನ್ನು ಆ ಬಾವಿಗೆ ಮರಳಿಬರುವ ಮಾತಿಲ್ಲವೆಂದು ಪ್ರಿಯದರ್ಶನನಿಗೆ ಹೇಳು" ಎಂದು ಹೇಳಿ, ಉತ್ಸಾಹದಿಂದ ಆ ಹೊಸ ಬಾವಿಯಲ್ಲೇ ನೀರಿನೊಳಗೆ ಹಾರಿತು.

ಮರದಲ್ಲಿರುವ ಕೋತಿ ಮೊಸಳೆಗೆ ಈ ಕಥೆಯನ್ನು ಹೇಳಿ, "ಎಲೋ ಪಾಪಿಷ್ಠನೇ! ಗಂಗಾದತ್ತನ ಹಾಗೆ ನಾನು ಕೂಡಾ ಮತ್ತೆ ಮೃತ್ಯುವಿನ ಬಾಯಿಯೊಳಗೆ ಬರಲಾರೆ. ಮಹಾಘಾತುಕಾ! ನಡೆ ನಡೆ!" ಎಂದಿತು.

"ಮಿತ್ರಾ, ಹಾಗೆ ಹೇಳಬೇಡ. ನಮ್ಮ ಮನೆಗೆ ಬಂದು ನನ್ನನ್ನು ಕೃತಘ್ನತೆಯ ಪಾಪದಿಂದ ಮುಕ್ತ ಮಾಡು. ನಾನು ಮಾಡುವ ಮನಃಪೂರ್ವಕವಾದ ಆತಿಥ್ಯವನ್ನು ಸ್ವೀಕರಿಸು. ಇಲ್ಲದೆ ಹೋದರೆ ನಿರ

ಶನವ್ರತ ಹಿಡಿದು ಆತ್ಮಹತ್ಯ ಮಾಡಿಕೊಳ್ಳುತ್ತೇನೆ. ಆ ಪಾಪ ನಿನಗೇ ಸೇರುತ್ತದೆ" ಎಂದಿತು ಮೊಸಳೆ.

"ಮೂರ್ಖಮೊಸಳೆಯೇ! ಒಂದುಸಾರಿ ನಿನ್ನ ಮೃತ್ಯುಮುಖದೊಳಗಿನಿಂದ ಹೊರಬಿದ್ದು ಮತ್ತೆ ಅದರೊಳಗೆ ಪ್ರವೇಶಿಸಲಿಕ್ಕೆ ನಾನೇನಾದರೂ ಲಂಬಕರ್ಣನೆಂದುಕೊಂಡೆಯಾ? ಅದೇನೋ ಸಿಂಹದ ಅಪಾರವಾದ ಬಲಧೈರ್ಯಗಳನ್ನು ನೋಡಿ, ಒಂದು ಸಾರಿ ಪ್ರಾಣ ಉಳಿಸಿಕೊಂಡು ಕೂಡಾ, ಗುಂಡಿಗೆಯೂ ಕಿವಿಗಳೂ ಇಲ್ಲದ ಕಾರಣದಿಂದಾಗಿ ಮತ್ತೆ ಮೋಸ ಹೋಗಿ ಸಾವಿನ ಬಾಯಿಗೆ ಬಿತ್ತು!" ಎಂದಿತು ಕೋತಿ. "ಮಿತ್ರನೇ. ಅದಾರು ಲಂಬಕರ್ಣ? ಅದು ಸಾವಿನಿಂದ ತಪ್ಪಿಸಿಕೊಂಡು ಕೂಡಾ ಮತ್ತೆ ಹೇಗೆ ಸಾವನ್ನು ಅಪ್ಪಿಕೊಂಡಿತು? ಅದೇನು ಕಥೆಯಪ್ಪ!" ಎಂದು ಮೊಸಳೆ ಕೇಳಲು, ಕೋತಿ ಹೀಗೆಂದಿತು:

### ಗುಂಡಿಗೆ, ಕಿವಿಗಳಿಲ್ಲದ ಕತ್ತೆಯ ಕಥೆ

ಒಂದು ದಟ್ಟವಾದ ಅರಣ್ಯದಲ್ಲಿ ಕರಾಳ ಕೇಸರವೆಂಬ ಸಿಂಹವಿದ್ದಿತು. ಧೂಸರಕವೆಂಬ ಒಂದು ನರಿ ಯಾವಾಗಲೂ ಆ ಸಿಂಹವನ್ನು ಅನುಸರಿಸಿಕೊಂಡೇ ಇರುತ್ತಿತ್ತು. ಒಂದುಸಾರಿ ಆ ಸಿಂಹಕ್ಕೆ ಒಂದು ಕಾಡಾನೆ ಗಂಟು ಬಿತ್ತು.

ಮದಿಸಿದ ಆ ಕಾಡಾನೆಯೊಂದಿಗೆ ಹೋರಾಡುವಾಗ ಸಿಂಹಕ್ಕೆ ತೀವ್ರವಾದ ಗಾಯವಾಯಿತು. ಅದರ ಬಾಧೆಯಿಂದ ಕದಲಲಾಗದೆ ಬಿದ್ದಲ್ಲೇ ಇರಬೇಕಾಯಿತು ಆ ಸಿಂಹ.

ಸಿಂಹವು ಬೇಟೆಯಾಡಲಾಗದೆ ಹೋದುದರಿಂದ ಅದಕ್ಕಿಂತ ಹೆಚ್ಚು ನರಿಗೇ ಚಿಂತೆ ಹಿಡಿಯಿತು. ಸಿಂಹದ ಉಚ್ಛಿಷ್ಟವಿಲ್ಲದುದರಿಂದ ನರಿ ಹಸಿವೆಯಿಂದ ತುಂಬ ನಿತ್ರಾಣಗೊಂಡಿತು. ಎರಡು ದಿನ ಕಟ್ಟುಪವಾಸ ಅನುಭವಿಸಿದ ಮೇಲೆ ಅದು ಸಿಂಹದೊಂದಿಗೆ, "ಮಹಾರಾಜರೆ, ನಾನು ಅಪಾರವಾದ ಹಸಿವೆಯಿಂದ ಕಾಲಾಡಿಸಲಾರದೆ ಹೋಗಿದ್ದೇನೆ. ತಮಗೆ ಹೇಗೆ ಸೇವೆ ಮಾಡಲಿ?" ಎಂದಿತು.

"ನೀನು ಯಾವುದಾದರೊಂದು ಮೃಗವನ್ನು ಉಪಾಯದಿಂದ ಇಲ್ಲಿಗೆ ಕರಕೊಂಡು ಬಂದರೆ, ನಾನು



ಹೇಗೋ ಒಂದು ವಿಧವಾಗಿ ಅದನ್ನು ಕೊಲ್ಲುತ್ತೇನೆ." ಎಂದು ಸಿಂಹವು ನರಿಯೊಂದಿಗೆ ಹೇಳಿತು.

"ನೋಡುತ್ತೇನೆ" ಎಂದು ಹೇಳಿ ನರಿ, ಆಹಾರಕ್ಕೆ ತಕ್ಕುದಾದ ಮೃಗವನ್ನು ಹುಡುಕುತ್ತ ಹತ್ತಿರದಲ್ಲಿದ್ದ ಒಂದು ಗ್ರಾಮಕ್ಕೆ ಹೋಗಿ, ಊರ ಕೆರೆಯ ಹತ್ತಿರ, ಬಹಳ ಪ್ರಯಾಸದಿಂದ ಹುಲ್ಲು ಮೇಯುತ್ತಿದ್ದ ಲಂಬ ಕರ್ಣವೆಂಬ ಕತ್ತೆಯನ್ನು ನೋಡಿತು. ನರಿ ಮೆಲ್ಲನೆ ಅದರ ಹತ್ತಿರ ಹೋಗಿ ಹೀಗೆ ಹೇಳಿತು:

"ನಮಸ್ಕಾರ ಮಾವಾ! ನಿನ್ನನ್ನು ನೋಡಿ ಬಹಳ ಕಾಲವಾಯಿತು. ಇದೇನು ಎಷ್ಟು ಸೊರಗಿ ಹೋಗಿರುವಿಯಲ್ಲಾ?"

"ಏನು ಮಾಡಲಪ್ಪಾ ಅಳಿಯರಾಯಾ? ಅಗಸರವನು ನನ್ನಿಂದ ಎಲ್ಲರೂ ಹೇಳುವ ಹಾಗೆ ಕತ್ತೇ ಚಾಕರಿ ಮಾಡಿಸುತ್ತಾನೆಯೇ ಹೊರತು ಒಂದು ಹಿಡಿ ಹುಲ್ಲನ್ನು ಸಹಾ ಕೊಡುವುದಿಲ್ಲ. ಮಣ್ಣು ಹೆಂಟೆ ಅಂಟಿರುವ ಈ ದೊರಗು ಹುಲ್ಲನ್ನು ತಿಂದರೆ ಮತ್ತೆ ಹ್ಯಾಗಿದ್ದೇನು ಹೇಳು" ಎಂದಿತು ಕತ್ತೆ.

"ಅಲ್ಲವೇ ಮತ್ತೆ! ಆದರೆ ಮಾವಾ, ಅಲ್ಲಿ ಕಾಣುವ ಕಾಡಿನ ಹತ್ತಿರ ನದಿಯ ಬದಿಯಲ್ಲಿ ಎಷ್ಟು ಒಳ್ಳೆ ಹುಲ್ಲಿದೆ ಗೊತ್ತಾ? ಅಲ್ಲಿಗೆ ಬಂದು ನನ್ನೊಟ್ಟಿಗೆ ಕುಶಾಲಾಗಿ ಹರಟೆ ಹೊಡೆಯುತ್ತ ಹಾಯಾಗಿ ಮೇಯಬಹುದಲ್ಲಾ?" ಎಂದಿತು ನರಿ.

"ಅಳಿಯಾ! ನಿನ ಮಾತು ಸರಿಯೇ. ಆದರೆ ನನ್ನಂಥಾ ಸಾಕು ಪ್ರಾಣಿಗಳು ಆ ಕಡೆಗೆ ಬಂದರೆ ಅಡವಿಯೊಳಗಿನ ಕ್ರೂರ ಮೃಗಗಳು ಕೊಂದು ಬಿಟ್ಟಾವು. ಅದೆಷ್ಟು ಒಳ್ಳೆಯ ಸ್ಥಳವಾದರೂ ನನಗೇನು ಲಾಭ ಹೇಳು? ಬೇಕೆಂದೇ ಹೇಗೆ ಸಾಯಲಿ?" ಎಂದಿತು ಕತ್ತೆ.

"ಹಾಗೆಲ್ಲಾ ನೆನೆಯಲೇ ಬೇಡ, ಆ ಪ್ರಾಂತವೆಲ್ಲಾ ನನ್ನ ರಕ್ಷಣೆಯಲ್ಲೇ ಇದೆ. ನನ್ನ ಅನುಮತಿ ಇಲ್ಲದೆ ಅಲ್ಲಿಗೆ ಒಂದು ಹುಳ ಕೂಡಾ ಬರಲು ಸಾಧ್ಯವಿಲ್ಲ. ಅದೂ ಅಲ್ಲದೆ ನಿನ್ನ ಕ್ರೂರ ಯಜಮಾನನು ಕೊಡುವ ಬಾಧೆಗಳನ್ನು ತಾಳಲಾರದೆ, ಮೂರು ಹೆಣ್ಣು ಕತ್ತೆಗಳು ಅಲ್ಲಿ ಬಂದು ಅಡಗಿ ಬದುಕಿವೆ. ಅಲ್ಲಿಯ ಪುಷ್ಟಿಕರವಾದ ಹಲ್ಲು ತಿಂದು, ನಿರ್ಮಲ ವಾದ ನೀರು ಕುಡಿದು ಕತ್ತೆಯೆಂದು ಹೋಲಿಸ ಲಿಕ್ಕಾಗದಂತೆ ತುಂಬ ಸೌಂದರ್ಯದಿಂದ ಬದಲಾಗಿ ಹೋಗಿವೆ. ಒಳ್ಳೆಯ ಯೌವನದಲ್ಲಿರುವ ಆ ಹೆಣ್ಣು ಕತ್ತೆಗಳಿಗೆ ಇನ್ನೂ ಮದುವೆಯಾಗಿಲ್ಲ. ತಮಗೆ ಒಳ್ಳೆಯ ಗಂಡನನ್ನು ಗ್ರಾಮಗಳಿಂದ ತಾರೆಂದು ಅವು ನನ್ನ ಹತ್ತಿರ ಯಾವಾಗಲೂ ಹೇಳುತ್ತವೆ. ಅದಕ್ಕೇ ನಾನು ಹುಡುಕುತ್ತಾ ಬಂದು ನಿನ್ನನ್ನು ನೋಡಿ ಕರಕೊಂಡು ಹೋಗೋಣವೇ ಎಂದುಕೊಂಡು ಇಲ್ಲಿಗೆ ಬಂದೆ" ಎಂದಿತು ನರಿ.





# ಮಾಯದ ಕಂಬಳಿ

ಕೋಪಿಸದೆ ಸ್ವಾರಸ್ಯವಾದ ಕಥೆಗಳನ್ನು ಮತ್ತೆ ಮತ್ತೆ ಹೇಳುವ ಬೇತಾಳದ ಸಹನಶಕ್ತಿಯನ್ನು ಮೆಚ್ಚುತ್ತಾ ತ್ರಿವಿಕ್ರಮರಾಜನು ಮತ್ತೆ ಮರದ ಬಳಿಗೆ ಹಿಂದಿರುಗಿ. ಕೊಂಬೆಯಲ್ಲಿ ನೇತಾಡುತ್ತಿದ್ದ ಶವವನ್ನು ಕೆಳಗಿಳಿಸಿ ಭುಜದ ಮೇಲೆ ಹೊತ್ತುಕೊಂಡು, ಎಂದಿನಂತೆ ಮೌನಮುದ್ರೆಯಿಂದ ಸ್ಮಶಾನದ ಕಡೆಗೆ ನಡೆಯತೊಡಗಿದನು. ಆಗ ಶವದೊಳಗಿರುವ ಬೇತಾಳವು ಮಾತಾಡಲು ತೊಡಗಿ. "ಮಹಾರಾಜನೇ, ನೀನು ಏನೋ ಒಂದು ಮಹಾಶಕ್ತಿಯನ್ನು ವಶಪಡಿಸಿಕೊಳ್ಳಲಿಕ್ಕಾಗಿಯೇ ಹೀಗೆ ಶ್ರಮಪಡುತ್ತಿರುವೆಯೆನ್ನಲು ಸಂದೇಹವಿಲ್ಲ. ಆದರೆ ಅಂತಹ ಶಕ್ತಿ ನಿನಗೆ ಸಿಕ್ಕಿದ ಮೇಲೆ ನೀನು ಅದನ್ನು ಬಿಡದೆ ಇರಿಸಿಕೊಳ್ಳುವೆ ಎಂಬುದನ್ನು ನಂಬಲಾಗುವುದಿಲ್ಲ. ಇದಕ್ಕೆ ನಿದರ್ಶನವಾಗಿ ನಿನಗೆ ಚಂಡೀದತ್ತನೆಂಬವನ ಸಮಾಚಾರವನ್ನು ಹೇಳುತ್ತೇನೆ. ದಾರಿಯ ಶ್ರಮ ತಿಳಿಯದಂತೆ ಕೇಳುತ್ತಾ ನಡೆ" ಎಂದು ಹೀಗೆ ಕಥೆಯನು ಪ್ರಾರಂಭಿಸಿತು :

ಪೂರ್ವಕಾಲದಲ್ಲಿ ಹಿಮಾಲಯ ಪರ್ವತಗಳಲ್ಲಿ ಸಂಚರಿಸಿಕೊಂಡು ಆತ್ಮಾನಂದನೆಂಬ ವೃದ್ಧನಾದ



ಯೋಗಿಯೊಬ್ಬನಿದ್ದನು. ಸುತ್ತುಮುತ್ತಲೂ ಇರುವವರು ಆಗಾಗ ಅವನನ್ನು ನೋಡಲು ಬರುವುದೂ, ತಮ್ಮ ಹಲವಾರು ಪ್ರಶ್ನೆಗಳಿಂದ ಅವನನ್ನು ತೊಂದರೆಪಡಿಸುವುದೂ ಹೆಚ್ಚಾಯಿತು. ಅವನ ಏಕಾಗ್ರತೆಗೆ ಭಂಗ ಬರುತ್ತಲೇ ಇದ್ದಿತು. ಆದಕ್ಕಾಗಿ ಅವನು ಒಂದು ಉಪಾಯ ಮಾಡಿದನು. ತನ್ನದೊಂದು ಹಳೆಯ ಕಂಬಳಿಯ ಮೇಲೆ ಮಂತ್ರಜಲವನ್ನು ಪ್ರೋಕ್ಷಿಸಿ ಅದಕ್ಕೊಂದು ಅದ್ಭುತ ಶಕ್ತಿಯನ್ನು ಬರಿಸಿದನು. ಅವನು ಅದನ್ನು ಹೊದ್ದುಕೊಂಡನೆಂದರೆ ಯಾರಿಗೂ ಕಾಣಿಸುವುದಿಲ್ಲ! ಈ ರಹಸ್ಯವು ಯಾರಿಗೂ ಗೊತ್ತಾಗಲೂ ಇಲ್ಲ. ಇದರಿಂದ ಅವನ ಧ್ಯಾನಸಮಾಧಿಗಳು ಸರಿಯಾಗಿಯೇ ಸಾಗುತ್ತಿದ್ದಿತು.

ಹೀಗಿರುವಾಗ ಒಂದು ದಿನ ಏನಾಯಿತೆಂದರೆ, ಯೋಗಿ ಆತ್ಮಾನಂದನು ತನ್ನ ಕಂಬಳಿಯನ್ನು ಹೆಗಲಲ್ಲಿ ಹಾಕಿಕೊಂಡು, ಒಂದು ಬಂಡೆಗಲ್ಲನ್ನು ದಾಟಿಕೊಂಡು ಹೋಗುವಾಗ, ಕಾಲು ಜಾರಿ ಬಂಡೆಯ ಆಚೆಯ ಬದಿಯಲ್ಲಿದ್ದ ಕಣಿವೆಯೊಳಗೆ ಬಿದ್ದುಬಿಟ್ಟನು. ಈ ಆಘಾತದಿಂದ ಅವನಿಗೆ ಬೋದ ತಪ್ಪಿ ಹೋಯಿತು. ಅವನ ಕಂಬಳಿ ಬಂಡೆಯ ಇನ್ನೊಂದು ಬದಿಗೆ ಬಿದ್ದುಬಿಟ್ಟಿತ್ತು.

ಹಾಗೆ ಅವನು ಬಿದ್ದು ಸ್ವಲ್ಪ ಹೊತ್ತಾದ ಮೇಲೆ, ಆ ಕಣಿವೆಯ ದಾರಿಯಾಗಿ ಒಬ್ಬ ಚಿಲ್ಲರೆ ವ್ಯಾಪಾರಿ ಸಂತೆಯ ಕಡೆಗೆ ಹೋಗುತ್ತಾ, ಬಂಡೆಯ ಬದಿಯಲ್ಲಿ ಬಿದ್ದಿದ್ದ ಕಂಬಳಿಯನ್ನು ನೋಡಿದನು. ಅದು ತುಂಬಾ ಹಳೆಯ ಕಂಬಳಿ.

ಅಂತಹ ಚಳಿಪ್ರದೇಶದಲ್ಲಿ ಅದನ್ನು ಸುಮ್ಮನೆ ಅಲ್ಲಿಯೇ ಕೊಳೆಯ ಬಿಡಲು ಅವನಿಗೆ ಮನಸ್ಸು ಬರಲಿಲ್ಲ. ಯಾವನಾದರೂ ದರಿದ್ರನು ಸ್ವಲ್ಪ ಬೆಲೆಗಾದರೂ ಅದನ್ನು ಕೊಂಡುಕೊಂಡಾನು ಎಂದು ಕೊಂಡು, ಅವನು ಅದನ್ನು ಎತ್ತಿ ಮಡಚಿ ತನ್ನ ಮೂಟೆಯೊಳಗಿಟ್ಟು, ಸಂತೆ ನಡೆಯುವ ಶೋಭಾವತೀ ನಗರಕ್ಕೆ ಹೋದನು.

ಶೋಭಾವತೀ ನಗರದಲ್ಲಿ ಒಬ್ಬ ಮುದುಕಭಿಕ್ಷುಕನು ಚಳಿಯಿಂದ ಸಂಕಟಪಡುತ್ತಿದ್ದನು. ವ್ಯಾಪಾರಿ ಅವನಿಗೆ ಆ ಕಂಬಳಿಯನ್ನು ಕೊಟ್ಟು, ಅವನು ಕೊಟ್ಟ ಅಲ್ಪಬೆಲೆಯನ್ನು ಪಡೆದು ಸಾರ್ಥಕನಾದನು. ಭಿಕ್ಷುಕನು ಆ ಕಂಬಳಿಯನ್ನು ಕೂಡಲೇ ಹೊದ್ದುಕೊಂಡು, ಆ ಕ್ಷಣದಲ್ಲೇ ಮಾಯವಾದುದನ್ನು ನೋಡಿ ಅಲ್ಲಿದ್ದವರೆಲ್ಲ ಆತ್ಮಾಶ್ಚರ್ಯಪಟ್ಟರು.

ಈ ವಿಚಿತ್ರವಾದ ಸಮಾಚಾರ ನಿಮಿಷ ಮಾತ್ರದಲ್ಲಿ ನಗರದೊಳಗೆಲ್ಲಾ ಹರಡಿತು. ಆ ಕಾಲದಲ್ಲಿ ಶೋಭಾವತಿಯಲ್ಲಿ ಕಳ್ಳತನಗಳೂ, ದುರಾಚಾರಗಳೂ, ಸ್ಪರ್ಧೆ ಹಟಮಾರಿತನಗಳೂ ಮಿತಿಮೀರಿ ಹೋಗಿದ್ದುವು. ಶೋಭಾವತಿಯ ರಾಜನಾದ ಚಂಡೀದತ್ತನು ಎಷ್ಟು ಪ್ರಯತ್ನಪಟ್ಟರೂ ಅವುಗಳನ್ನು ಅಂಕೆಗೆ ತರಲು ಸಾಧ್ಯವಾಗದೆ ಚಿಂತೆಯಲ್ಲಿದ್ದನು. ಆ

ಸಮಯದಲ್ಲಿ ಕಂಬಳಿಯ ಮಹತ್ವವನ್ನು ಕುರಿತು, ಎಲ್ಲರಿಗೂ ತಿಳಿದು ಬಂದಿತು.

ದುರಾಶೆಯುಳ್ಳವರು ದುಷ್ಟರು ಆ ಮಾಯದ ಕಂಬಳಿಯ ಭಿಕ್ಷುಕ ಎಲ್ಲಿದ್ದಾನೆಂದು ಊರೂರು ಹುಡುಕತೊಡಗಿದರು. ಇಷ್ಟಬಂದ ಹಾಗೆ ಕಳ್ಳತನ ಮಾಡಲಿಕ್ಕೂ, ಸ್ವೇಚ್ಛೆಯಾಗಿ ದುರಾಚಾರಗಳನ್ನು ಸಾಗಿಸಲಿಕ್ಕೂ, ಸಿಕ್ಕಿಬೀಳದಂತೆ ಪ್ರತಿ ಪಕ್ಷದವರನ್ನು ಬಗ್ಗುಬಡೆಯಲಿಕ್ಕೂ ಅಂತಹ ಅದೃಶ್ಯಕರಣಿ ಬಹಳ ಉಪಯೋಗವಾದುದಷ್ಟೆ ?

ಕಂಬಳಿಯನ್ನು ಹೊದ್ದುಕೊಂಡು ಯಾರಿಗೂ ಕಾಣದೆ ಸುಳಿದಾಡುವ ಭಿಕ್ಷುಕನಿಗೆ ದುಷ್ಟರ ಮಾತು ಗಳು ಕೇಳಿಸಿದುವು. ಹೇಗಾದರೂ ಒಂದು ದಿನ ದುಷ್ಟರು ತನ್ನ ಕಂಬಳಿಯನ್ನು ಲಪಟಾಯಿಸುವ ರೆಂದು ಅವನಿಗೆ ಗೊತ್ತಾಯಿತು. ಅವನು ತನ್ನ ಊರುಗೋಲನ್ನು ಒಂದು ಪೊದರಿನಲ್ಲಿಟ್ಟು ಯಾರಿಗೂ ಗೊತ್ತಾಗದಂತೆ ನಡೆಯತೊಡಗಿದನು. ಆ ಕಂಬಳಿಯಿಂದ ಅವನಿಗೆ ಭಿಕ್ಷೆಬೇಡಲಿಕ್ಕೂ ಸಾಧ್ಯ ವಾಗದೆ, ಹಸಿವೆಯ ಸಂಕಟ ಕಾಡತೊಡಗಿತು. ಕಂಬಳಿ ಯೊಂದು ಪೀಡೆಯಾಯಿತು ಅವನಿಗೆ.

ಆ ರಾತ್ರಿ ಭಿಕ್ಷುಕನು ತುಂಬಾ ಆಲೋಚನೆ ಮಾಡಿದನು. ತನ್ನ ಕಂಬಳಿಗಾಗಿ ಅನೇಕ ಜನರು ಹುಡುಕಾಡುತ್ತಿದ್ದಾರೆ. ಆದರೆ ಆ ಕಂಬಳಿಯಿಂದ ತನಗೇನೂ ಪ್ರಯೋಜನವೂ ಇಲ್ಲ. ಆದುದರಿಂದ ಭಿಕ್ಷುಕನು ಬೆಳಗಾಗುವಾಗ ಒಂದು ನಿಶ್ಚಯಕ್ಕೆ ಬಂದು, ಆ ಕಂಬಳಿ ಹೊದ್ದುಕೊಂಡು ಅದೃಶ್ಯನಾಗಿ ರಾಜನ ಸಭೆಗೆ ಹೋಗಿ, ತಾನು ಹೊದ್ದ ಕಂಬಳಿ ಯನ್ನು ತೆಗೆದು ರಾಜನ ಮುಂದೆ ಪ್ರತ್ಯಕ್ಷನಾದನು.

"ಮಹಾಪ್ರಭುಗಳೇ, ಈ ಕಂಬಳಿಯಿಂದ ನನಗೆ ಪ್ರಾಣಹಾನಿಯ ಹೊರತು ಸುಖವೂ ಇಲ್ಲ, ಶಾಂತಿಯೂ ಇಲ್ಲ. ಇದು ತಮ್ಮ ಹತ್ತಿರವಿದ್ದರೆ ತಮಗೆ ಉಪಯೋಗವಾದೀತು" ಎಂದು ಹೇಳಿ ಭಿಕ್ಷುಕನು ಆ ಕಂಬಳಿಯನ್ನು ರಾಜನಿಗೆ ಕೊಟ್ಟನು.

ರಾಜನು ಅದನ್ನು ಸ್ವತಃ ಪರೀಕ್ಷೆಮಾಡಿ, ಅದರ ಮಹತ್ವವನ್ನು ತಿಳಿದುಕೊಂಡು, ಮುದಿಭಿಕ್ಷುಕನಿಗೆ





ಜೀವಿತವು ಸುಖವಾಗಿ ಕಳೆಯುವಂತೆ ಏರ್ಪಾಡು ಮಾಡಿಸಿ, ಕಂಬಳಿಯನ್ನು ತಾನಿಟ್ಟುಕೊಂಡನು.

ಇಷ್ಟರಲ್ಲಿ ಬಂಡೆಯ ಕಣಿವೆಯಲ್ಲಿ ಬಿದ್ದು ಬೋಧ ತಪ್ಪಿದ ಆತ್ಮಾನಂದಯೋಗಿ, ಎಚ್ಚರಕ್ಕೆ ಬಂದು, ಸಮಾಳಿಸಿಕೊಂಡು; ತನ್ನ ಕಂಬಳಿ ಚಂಡೀದತ್ತ ರಾಜನ ಹತ್ತಿರ ಇರುವುದನ್ನು ತಿಳಿದುಕೊಂಡನು. ಬಳಿಕ ಅವನು ಶೋಭಾವತಿ ನಗರಕ್ಕೆ ಬಂದು, ರಾಜನನ್ನು ಸಂಧಿಸಿ, ತನ್ನ ಕಂಬಳಿಯನ್ನು ತನಗೆ ಕೊಡಬೇಕೆಂದು ಕೇಳಿದನು.

ಆಗ ರಾಜನು ಯೋಗಿಯನ್ನು ಕುರಿತು, "ರಾಜ್ಯದ ಶ್ರೇಯಸ್ಸಿನ ದೃಷ್ಟಿಯಿಂದ ಇದು ನನ್ನ ಹತ್ತಿರ ಇರುವುದೇ ಒಳ್ಳೆಯದು. ಅದಕ್ಕೆ ಅನುಮತಿ ಕೊಡಬೇಕು" ಎಂದನು. ಆತ್ಮಾನಂದನು ರಾಜನ ಮಾತಿಗೆ ಒಪ್ಪಿಕೊಂಡು, ಯಾವುದಕ್ಕೂ ಒಳ್ಳೆಯದೆಂದು ರಾಜನ ಕೈಗೆ ಒಂದು ರಕ್ಷಾಬಂಧನವನ್ನು ಕಟ್ಟಿ ಹೊರಟುಹೋದನು.

ಅನಂತರ ರಾಜನು ಮಾಯದ ಕಂಬಳಿಯ ಸಹಾಯದಿಂದ ಅನೇಕ ಮಂದಿ ದುರಾಚಾರಿಗಳನ್ನೂ, ಕಳ್ಳರನ್ನೂ, ತಂತ್ರಗಾರರನ್ನೂ ಹಿಡಿದು ಅವರನ್ನೆಲ್ಲ ಶಿಕ್ಷೆಗೆ ಒಳಪಡಿಸಿದನು.

ಮಾಯದ ಕಂಬಳಿ ಎಲ್ಲಿ ಹೋಯಿತೋ ಎಂದು ತಹತಹಿಸಿಕೊಂಡಿದ್ದವರಿಗೆಲ್ಲ ಅದು ರಾಜನ ಕೈಗೆ ಸೇರಿತೆಂದು ತಿಳಿದುಹೋಯಿತು. ಕಳ್ಳರ ಗುಂಪಿನಿಂದ ಹಿಡಿದು ಎಷ್ಟೋ ದುರ್ಮಾರ್ಗಿಗಳು ಸಿಕ್ಕಿಬಿದ್ದು ಶಿಕ್ಷೆಗೆ ಒಳಗಾದುದರಿಂದ ನಗರದಲ್ಲಿ ಒಳ್ಳೆಯ ಗಾಳಿ ಸುಳಿದಾಡತೊಡಗಿತು. ಚಂಡೀದತ್ತ ರಾಜನ ಮನಸ್ಸಿಗೆ ತುಂಬಾ ಶಾಂತಿಯುಂಟಾಯಿತು.

ಒಂದು ದಿನ ರಾಜನಿಗೆ ರಾಜನರ್ತಕಿಯಾದ ಚಂಚಲೆಯನ್ನು ನೋಡಬೇಕೆಂದು ತೋರಿತು. ಅವನು ಕಂಬಳಿ ಹೊದ್ದುಕೊಂಡು ಯಾರಿಗೂ ಗೊತ್ತಾಗದಂತೆ ಚಂಚಲೆಯ ಮನೆಗೆ ಹೋದನು. ಆಮೇಲೆ ರಾಜನು ಆಗಾಗ ಯಾರಿಗೂ ತಿಳಿಯದಂತೆ ಚಂಚಲೆಯ ಮನೆಗೆ ಹೋಗಿ ಬರಲು ತೊಡಗಿದನು.

ಒಂದು ದಿನ ಚಂಚಲೆ ಮಾಯದ ಕಂಬಳಿಯನ್ನು ಎರಡು ದಿನಗಳ ಮಟ್ಟಿಗೆ ತನ್ನ ಮನೆಯಲ್ಲಿ ಇಟ್ಟಿರಬೇಕೆಂದು ರಾಜನನ್ನು ಕೇಳಿದಳು. ಅವಳ ಆಸೆಯನ್ನು ನಿರಾಕರಿಸಲಾಗದೆ ರಾಜನು, "ನೀನು ನನ್ನೊಂದಿಗೆ ನನ್ನ ಮಂದಿರದ ವರೆಗೆ ಅದೃಶ್ಯವಾಗಿ ಬಂದು, ಕಂಬಳಿಯನ್ನು ತೆಗೆದುಕೊಂಡು ಹಿಂದಿರುಗು" ಎಂದನು.

ಅದರಂತೆ ಇಬ್ಬರೂ ಕಂಬಳಿ ಹೊದ್ದುಕೊಂಡು ಒಟ್ಟಿಗೆ ಅದೃಶ್ಯರಾಗಿ ರಾಜಮಂದಿರಕ್ಕೆ ಬಂದರು. ಚಂಚಲೆ ರಾಜನನ್ನು ಬಿಟ್ಟು ಕಂಬಳಿ ಹೊದ್ದುಕೊಂಡು ತನ್ನ ಮನೆಗೆ ಹಿಂತಿರುಗಿದಳು.

ಕಂಬಳಿ ಹೊದ್ದುಕೊಂಡರೂ ತನ್ನ ಕಣ್ಣಿಗೆ ಕಾಣುವವಳನ್ನು ನೋಡಿ ರಾಜನಿಗೆ ಆಶ್ಚರ್ಯವಾಯಿತು. ಅವಳು ಅವನ ಕಣ್ಣಿಗೆ ಸ್ಪಷ್ಟವಾಗಿಯೇ ಕಾಣು

ತ್ತಿದ್ದಾಳೆ. ಇದಕ್ಕೆ ಕಾರಣ, ಆತ್ಮಾನಂದಯೋಗಿ ತನ್ನ ಕೈಗೆ ಕಟ್ಟಿದ ರಕ್ಷಾಬಂಧನವೇ ಆಗಿರಬೇಕೆಂದು ರಾಜನಿಗೆ ಹೊಳೆಯಿತು.

ಚಂಚಲೆ ನೆಟ್ಟಗೆ ತನ್ನ ಮನೆಗೆ ಹೋಗುವುದನ್ನು ಬಿಟ್ಟು ಮತ್ತೊಂದು ದಿಕ್ಕಿಗೆ ತಿರುಗಿದುದನ್ನು ನೋಡಿ ರಾಜನಿಗೆ ಕುತೂಹಲವೆದ್ದಿತು.

ಕೂಡಲೇ ಅವನು ಅವಳನ್ನು ಬಿಡದೆ ಅನುಸರಿಸಿದನು. ಅವಳು ಕೋಶಾಧಿಕಾರಿ ವಿಕ್ರಮನ ಮನೆಗೆ ಹೊಕ್ಕಳು. ತನ ಜ್ಞಾತಿಬಂಧುವಾದ ವಿಕ್ರಮನ ಮನೆಗೆ ಚಂಚಲೆ ಏಕೆ ಹೊಕ್ಕಳೆಂದು ಯೋಚಿಸುತ್ತಾ ಚಂಡೀದತ್ತನು ಕಲಕಿದ ಮನವುಳ್ಳವನಾಗಿ ತನ್ನ ಶಯನಾಗಾರಕ್ಕೆ ಹಿಂದಿರುಗಿ ಮಲಗಿಕೊಂಡನು. ಆದರೆ ಅವನಿಗೆ ನಿದ್ರೆಯೇ ಬರಲಿಲ್ಲ.

ನಡುರಾತ್ರಿಯ ವೇಳೆಯಲ್ಲಿ ವಿಕ್ರಮನು ಮಾಯದ ಕಂಬಳಿಯನ್ನು ಹೊದ್ದುಕೊಂಡು. ಕೈಯಲ್ಲಿ ಕತ್ತಿ ಹಿಡಿದು ತನ್ನ ಶಯನಾಗಾರದೊಳಗೆ ಪ್ರವೇಶಿಸುವುದನ್ನು ಚಂಡೀದತ್ತರಾಜನು ನೋಡಿದನು. ತನ್ನನ್ನು ಕೊಲ್ಲಲಿಕ್ಕೇ ಬರುವನೆಂದು ಗೊತ್ತಾಗಿ ಚಟಕ್ಕನೆದ್ದು ಕತ್ತಿ ಎತ್ತಿಕೊಂಡು ವಿಕ್ರಮನ ಮೇಲೆ ಹಾರಿಬಿದ್ದನು.

ರಾಜನು ನಿದ್ದೆಯಲ್ಲಿರುವನೆಂದೂ, ಎಚ್ಚರದಲ್ಲಿದ್ದರೂ ಮಾಯದ ಕಂಬಳಿಯಿಂದಾಗಿ ತನ್ನನ್ನು ನೋಡಲಾರನೆಂದೂ ನಂಬಿದ್ದ ವಿಕ್ರಮನು, ಈ ಬಗೆಯ ಪರಿಣಾಮಕ್ಕೆ ತಯಾರಾಗಿ ಬಂದಿರಲಿಲ್ಲ. ಅಂತೆಯೇ ದ್ರೋಹಿಯಾದ ಅವನು ರಾಜನ ಕೈಯಲ್ಲಿ ಸುಲಭದಲ್ಲಿ ಸತ್ತುಬಿದ್ದನು.

ರಾಜಾಜ್ಞೆಯ ಮೇರೆಗೆ ಭಟರು ಚಂಚಲೆಯನ್ನು ಬಂಧಿಸಿ ತಂದರು. ರಾಜನನ್ನು ಕೊಲೆ ಮಾಡಿಬಿಟ್ಟರೆ, ವಾರಸತ್ವದ ಪ್ರಕಾರ ತಾನೇ ರಾಜನಾಗುವುದಾಗಿ ವಿಕ್ರಮನು ಭಾವಿಸಿದ್ದನಂತೆ. ಆದಕ್ಕೆ ಸಹಾಯಕಳಾದ ಚಂಚಲೆಯನ್ನು ಪಟ್ಟದ ರಾಣಿಯನ್ನಾಗಿ ಮಾಡುವೆನೆಂದು ಭರವಸೆಕೊಟ್ಟಿದ್ದನಂತೆ. ಚಂಚಲೆಯೇ ಇದನ್ನೆಲ್ಲ ಹೇಳಿದಳು. ಚಂಡೀದತ್ತನು ಅವಳಿಗೆ ದೇಶಬಹಿಷ್ಕಾರ ಶಿಕ್ಷೆ ವಿಧಿಸಿದನು.



ಇದೆಲ್ಲ ಆದ ಮರುದಿನವೇ ರಾಜನು ಹಿಮಾಲಯದಲ್ಲಿರುವ ಆತ್ಮಾನಂದಯೋಗಿಯ ಬಳಿಗೆ ಹೋಗಿ, "ಸ್ವಾಮೀ, ನಿಮ್ಮ ಕಂಬಳಿಯಿಂದ ನನಗಾಗ ಬೇಕಾದ ಕಾರ್ಯವೆಲ್ಲಾ ಮುಗಿಯಿತು. ಇನ್ನು ನಿಮ್ಮ ಕಂಬಳಿಯನ್ನು ನೀವೇ ಇಟ್ಟುಕೊಳ್ಳಿರಿ. ನನಗೆ ಬೇಡ" ಎಂದು ಹೇಳಿ ಮಾಯದ ಕಂಬಳಿಯನ್ನು ಆತ್ಮಾನಂದನಿಗೇ ಕೊಟ್ಟು ಹಿಂದಿರುಗಿದನು.

ಬೇತಾಳವು ಹೀಗೆ ಕಥೆಯನ್ನು ಮುಗಿಸಿ, "ರಾಜನೇ, ನನಗೆ ಕೆಲವು ಸಂದೇಹಗಳಿವೆ. ಆತ್ಮಾನಂದನು ತನ್ನ ಕಂಬಳಿಗಾಗಿ ಶೋಭಾವತಿ ನಗರಕ್ಕೆ ಹೋಗಿ, ಕಂಬಳಿಯನು ತನಗೆ ಕೊಡುವಂತೆ ಕೇಳಿದನಲ್ಲಾ, ಅದೇಕೆ? ತನಗೆ ಬೇಕಾಗಿದ್ದರೆ ಇನ್ನೊಂದು ಕಂಬಳಿಯನ್ನು ಸೃಷ್ಟಿಸಿಕೊಳ್ಳುತ್ತಿದ್ದನಷ್ಟೆ? ತನ್ನ ಕಂಬಳಿ ಇನ್ನೊಬ್ಬರ ಬಳಿಯಲ್ಲಿರುವುದು ಅವನಿಗೇಕೆ ಇಷ್ಟವಿಲ್ಲದೆ ಹೋಯಿತು? ರಾಜನು ಆ ಕಂಬಳಿಯ ಸಹಾಯದಿಂದ ಎಷ್ಟೋ ಅಪರಾಧಿಗಳನ್ನು ಹಿಡಿದು ಶಿಕ್ಷಿಸಿ ಅದರ ಪ್ರಯೋಜನವನ್ನು ತಿಳಿದು ಕೂಡಾ ಕಡೆಗೆ ಅದನ್ನು ಆತ್ಮಾನಂದಯೋಗಿಗೇ ತಿರುಗಿಕೊಟ್ಟನೇಕೆ? ರಾಜ್ಯದಲ್ಲಿ ಇನ್ನು ವಿಕ್ರಮನಂತಹ ದುಸ್ತಂತ್ರಗಾರರು ಇರಲಾರರೆಂದುಕೊಂಡನೆ? ಈ ಸಂದೇಹಗಳಿಗೆ ಸಮಾಧಾನ ತಿಳಿದು ಕೂಡಾ ಹೇಳದೆ ಹೋದರೆ ನಿನ್ನ ತಲೆ ಪುಡಿಪುಡಿಯಾಗುತ್ತದೆ!" ಎಂದು ಹೇಳಿ ಸುಮ್ಮನಾಯಿತು. ಅದಕ್ಕೆ ತ್ರಿವಿಕ್ರಮನು ಹೀಗೆಂದನು: "ಮಹಿಮೆಯುಳ್ಳ ವಸ್ತುಗಳು ಒಳ್ಳೆಯವರ ಕೈಯಲ್ಲಿ ಒಳ್ಳೆಯ ಕಾರ್ಯಗಳಿಗೂ, ಕೆಟ್ಟವರ ಕೈಯಲ್ಲಿ ಕೆಟ್ಟ ಕಾರ್ಯಗಳಿಗೂ ಉಪಯೋಗಪಡುತ್ತವೆ. ಕೆಲವರಿಗೆ ಯಾವುದಕ್ಕೂ ಪ್ರಯೋಜನವಿಲ್ಲವೆಂದು ಭಿಕ್ಷುಕನ ಅನುಭವದಿಂದ ಗೊತ್ತಾಗುತ್ತದೆ. ಅದರಿಂದ ಅವನಿಗೆ ಅಪಾಯವೇ ಆಯಿತು. ತಾನು ಒಳ್ಳೆಯವನಾದುದರಿಂದ ಅದನ್ನು ಒಳಿತಿಗೇ ಉಪಯೋಗಿಸಿಕೊಳ್ಳಬಹುದೆಂದು ರಾಜನಿಗೆ ಭ್ರಮೆಯಾಯಿತು. ಆ ಕಂಬಳಿ ದುಷ್ಟರ ಕೈಗೆ ಹೋದರೆ ಎಂತಹ ಅಪಾಯವೆಂಬುದು ಅವನಿಗೆ ಗೊತ್ತಾಗಿಬಿಟ್ಟಿತು. ಇದನ್ನೆಲ್ಲ ತಿಳಿದಿದ್ದ ಆತ್ಮಾನಂದನು ಅವನ ಕೈಗೆ ರಕ್ಷಾಬಂಧನವನ್ನು ಕಟ್ಟಿದ್ದ. ಆದುದರಿಂದ ಆತ್ಮಾನಂದನು ಶೋಭಾವತಿ ನಗರಕ್ಕೆ ಹೋಗಿ ತನ್ನ ಕಂಬಳಿ ಕೊಡುವಂತೆ ಏಕೆ ಕೇಳಿದನೆಂಬುದೂ ತಿಳಿಯುತ್ತದೆ. ರಾಜನಿಗೆ ಕೂಡಾ ಆ ಸಂಗತಿ ತಿಳಿದು ಬಂದುದರಿಂದ ಕಂಬಳಿಯನ್ನು ಆತ್ಮಾನಂದನಿಗೇ ತಿರುಗಿಕೊಟ್ಟನು."

ಹೀಗೆ ರಾಜನಿಗೆ ಮೌನಭಂಗವಾದ ಕೂಡಲೇ ಬೇತಾಳವು ಶವಸಹಿತ ಮಾಯವಾಗಿ ಹೋಗಿ ಮೊದಲಿನಂತೆ ಮರದ ಕೊಂಬೆಯನ್ನು ಹಿಡಿದು ನೇತಾಡತೊಡಗಿತು.





# ದಡ್ಡ ದುಗ್ಗಮ್ಮ

ದೇವಪುರವೆಂಬ ಊರಿನಲ್ಲಿ ದೇವಯ್ಯ ಮಂಗಮ್ಮ ಎಂಬ ಗಂಡ ಹೆಂಡಿರಿದ್ದರು. ದೇವಯ್ಯ ಊರೂರು ತಿರುಗಿ ವ್ಯಾಪಾರ ಮಾಡುವವನಾದುದರಿಂದ, ಯಾವಾಗ ಮನೆಯಲ್ಲಿರುವನೆಂದು ಹೇಳಲು ಸಾಧ್ಯವಿಲ್ಲ. ದುಗ್ಗಮ್ಮ ತುಂಬಾ ಸರಳಗುಣದವಳು. ಮರೆ ಮೋಸಗಳನ್ನು ಅರಿಯದವಳು. ದೇವಯ್ಯ ಅವಳಿಗೆ ಎಷ್ಟು ಎಚ್ಚರಿಕೆ ಹೇಳಿದರೂ ಯಾರೋ ಒಬ್ಬರು ಮೋಸ ಮಾಡುತ್ತಲೇ ಇರುತ್ತಾರೆ.

ಒಂದು ದಿನ ದೇವಯ್ಯ ಸ್ವಲ್ಪದೂರ ಪ್ರಯಾಣ ಮಾಡಬೇಕಾಗಿ ಬಂತು. ಅವನು ಹೆಂಡತಿಯೊಂದಿಗೆ "ಊರಲ್ಲಿ ಕಳ್ಳರು ಹೆಚ್ಚಾಗಿದ್ದಾರೆ. ಯಾರೊಂದಿಗೂ ಮಾತಾಡಬೇಡ. ಮೋಸಗಾರರು ಬಂದರೆ ಮಾತಾಡದೆ ಬಾಗಿಲು ಮುಚ್ಚಿ ಹೊಗೆ ಹಾಕಿಬಿಡು" ಎಂದು ಹೇಳಿ ಹೊರಟುಹೋದನು.

ಆ ದಿನ ರಾತ್ರಿ ದುಗ್ಗಮ್ಮ ಒಬ್ಬಳೇ ಮನೆಯಲ್ಲಿದ್ದಳು. ಅವಳು ನಿದ್ದೆಯಲ್ಲಿರುವಾಗ ಹೊರಗೆ ಯಾರೋ ಬಾಗಿಲು ತಟ್ಟುವ ಶಬ್ದ ಕೇಳಿಸಿತು. ಬಂದವರು ಮೋಸಗಾರರೋ ಒಳ್ಳೆಯವರೋ ನೋಡಬೇಕೆಂದು ಬಾಗಿಲು ತೆರೆದಳು. ಇಬ್ಬರು ಕಳ್ಳರು ಗಡಿಬಿಡಿಯಿಂದ ಒಳಕ್ಕೆ ನುಗ್ಗಿ ಬಂದರು. ಅವರ ಕೈಗಳಲ್ಲಿ ಯಾವುದೋ ಗಂಟುಗಳಿದ್ದುವು. ಅವರು ಅಡಗಿಕೊಳ್ಳಲು ಜಾಗ ಹುಡುಕುತ್ತ "ನಮ್ಮನ್ನು ರಕ್ಷಕಭಟರು ಓಡಿಸಿಕೊಂಡು ಬರುತ್ತಿದ್ದಾರೆ. ಅವರೊಂದಿಗೆ ನಮ್ಮ ಸಂಗತಿ ಹೇಳಬೇಡ" ಎಂದರು.

ಅವಳು ಸರಿ ಎಂಬಂತೆ ತಲೆಯಾಡಿಸಿದಳು. ಸ್ವಲ್ಪ ಹೊತ್ತಿಗೆ ರಕ್ಷಕಭಟರು ಬಂದು ಬಾಗಿಲು ತಟ್ಟಿದರು. ದುಗ್ಗಮ್ಮ ಬಾಗಿಲು ತೆರೆದಳು.

"ಒಳಗೆ ಗಂಡುಸರಿದ್ದಾರೆಯೆ ?" ಎಂದು ರಕ್ಷಕಭಟರು ಕೇಳಿದರು. ಅವರು ತನ್ನ ಗಂಡನನ್ನು ಕೇಳುತ್ತಿದ್ದಾರೆಂದುಕೊಂಡು ಇಲ್ಲವೆಂಬಂತೆ ತಲೆಯನ್ನು ಅಡ್ಡಕ್ಕೆ ಆಡಿಸಿದಳು. ಯಾರೊಡನೆಯೂ ಮಾತಾಡಬಾರದೆಂದು ಗಂಡನು ಹೇಳಿರುವನಷ್ಟೇ? "ಈ ದಾರಿಯಾಗಿ ಯಾರಾದರೂ ಓಡಿಹೋದ ಹಾಗೆ ಶಬ್ದ ಕೇಳಿಸಿತೇನು ?" ಎಂದು ರಕ್ಷಕಭಟರು ಕೇಳಿದರು. ಇಲ್ಲವೆಂಬಂತೆ ತಲೆ ಯಾಡಿಸಿದಳು ದುಗ್ಗಮ್ಮ.

"ಇವಳು ಮೂಕಿ. ಇಲ್ಲಿ ನಾವು ತಡ ಮಾಡುತ್ತಾ ನಿಂತರೆ ಕಳ್ಳರು ಬಹುದೂರ ಹೋಗಿಬಿಡುತ್ತಾರೆ" ಎಂದು ಇನ್ನೊಬ್ಬ ರಕ್ಷಕಭಟನು ಹೇಳಿದನು. "ನಿಜ

ಪಿ. ಖಾದರ್‌ವಲೀಖಾನ್

ನಿಜ" ಎನ್ನುತ್ತಾ ರಕ್ಷಕಭಟರು ಹೊರಗೆ ಬಂದು ಬೇಗ ಬೇಗನೆ ಹೊರಟುಹೋದರು.

ಅಡಗಿದ ಕಳ್ಳರಿಬ್ಬರೂ ಈಚೆಗೆ ಬಂದು, "ನಾವು ಇಲ್ಲಿಯೇ ನಮ್ಮ ಮೂಟೆ ಹಂಚಿಕೊಳ್ಳೋಣ. ಇವಳು ಮೂಕಳಾದ್ದರಿಂದ ನಮ್ಮ ಗುಟ್ಟು ಯಾರೊಂದಿಗೂ ಹೇಳಲು ಸಾಧ್ಯವಿಲ್ಲ" ಎಂದು ಕೊಂಡರು ಕಳ್ಳರು.

ಒಬ್ಬ ಕಳ್ಳ ನಗಗಳನ್ನೂ ನಾಣ್ಯಗಳನ್ನೂ ಸಮ ಭಾಗ ಮಾಡಿ, ಒಂದು ದೊಡ್ಡ ಭಾಗವನ್ನು ತಾನು ತೆಗೆದುಕೊಂಡನು. "ನೀನು ನನ್ನನ್ನು ಮೋಸ ಮಾಡಲು ನೋಡುವೆ. ನಾನು ಹಂಚುತ್ತೇನೆ ಬಿಡು" ಎಂದನು ಎರಡನೇಯವನು.

ಹೇಳುತ್ತಾ ಅವನು ಎರಡು ಭಾಗಗಳನ್ನೂ ಒಂದಾಗಿ ಬೆರಸಿ, ಮತ್ತೆ ಭಾಗ ಮಾಡಿ ದೊಡ್ಡ ಭಾಗವನ್ನು ತಾನು ಎತ್ತಿಕೊಳ್ಳಲು ನೋಡಲು, ಮೊದಲನೆಯವನು ಅಭ್ಯಂತರ ಹೇಳಿದನು.

ಇದನ್ನು ನೋಡಿದ ಮೇಲೆ ಅವರಿಬ್ಬರೂ ಮೋಸಗಾರರೇ ಎಂದು ದುಗ್ಗಮ್ಮನ ತಲೆಗೆ ಗೊತ್ತಾಯಿತು.

ಆಗ ಕಳ್ಳರು ಮೂಕಳಾದ ದುಗ್ಗಮ್ಮನಿಂದಲೇ ಪಾಲು ಮಾಡಿಸಿಕೊಳ್ಳೋಣವೆಂಬ ನಿಶ್ಚಯಕ್ಕೆ ಬಂದು, "ಏನಮ್ಮ, ಇದನ್ನೆಲ್ಲ ನೀನೇ ಸಮನಾಗಿ ಹಂಚು ನೋಡೋಣ. ನಿನಗೂ ಒಂದೊಂದು ಹುಟ್ಟು ಕೊಡುತ್ತೇವೆ" ಎಂದರು.

ದುಗ್ಗಮ್ಮ ಸರಿ ಎಂಬಂತೆ ತಲೆಯಾಡಿಸಿ, ಹೊಗೆ ಹಾಕಬೇಕೆಂದುಕೊಂಡು, ತಟಕ್ಕನೆದ್ದು ಹೊರಗೆ ಬಂದು, ಕುಳಿತುಕೊಂಡಿರುವಂತೆ ಅವರಿಗೆ ಸನ್ನೆ ಮಾಡುತ್ತ, ಆ ಕೋಣೆಯ ಬಾಗಿಲೆಳೆದು ಚಿಲಕ ಸಿಕ್ಕಿಸಿ, ಅದರ ಮೇಲೆ ಬೀಗ ಕೂಡಾ ಹಾಕಿಬಿಟ್ಟಳು. ಅನಂತರ ಅವಳು ಕುಂಪಟಿಯನ್ನು ಹಚ್ಚಿ, ಅದರಲ್ಲಿ ಒಣ ಮೆಣಸಿನಕಾಯಿಗಳನ್ನು ಹಾಕಿ, ಆ ಕೋಣೆಯ ಬಾಗಿಲ ಹತ್ತಿರ ಇಟ್ಟು, ತಾನು ಚಾವಡಿಯಲ್ಲಿ ಮಲಗಿಕೊಂಡಳು.

ಕಳ್ಳರು ಕೋಣೆಯೊಳಗೆ ಮೆಣಸಿನಕಾಯಿಯ ಖಾರದ ಹೊಗೆಯ ಶ್ವಾಸೋಚ್ಛ್ವಾಸದಿಂದ ತೊಳ ಲಾಡಿ ಮೂರ್ಛೆಹೋದರು.

ಬೆಳಗಾದ ಮೇಲೆ ದೇವಯ್ಯ ಮನೆಗೆ ಬಂದು ನಡೆದ ಸಂಗತಿಯನೆಲ್ಲಾ ಹೆಂಡತಿಯಿಂದ ತಿಳಿದು ಕೊಂಡನು. ಕೂಡಲೇ ಅವನು ರಕ್ಷಕಭಟರನ್ನು ಕರೆದುಕೊಂಡು ಬಂದು ಕಳ್ಳರನ್ನು ಅವರ ವಶಕ್ಕೆ ಒಪ್ಪಿಸಿದನು. ಎಲ್ಲರೂ ದುಗ್ಗಮ್ಮನನ್ನು ಮೆಚ್ಚಿ ಮಾತಾಡಿದರು. ಕಳ್ಳರನ್ನು ಹಿಡಿಸಿಕೊಟ್ಟುದಕ್ಕೆ ಅವ ಳಿಗೆ ರಾಜನ ಕಡೆಯಿಂದ ದೊಡ್ಡದೊಂದು ಬಹು ಮಾನ ಕೂಡಾ ಸಿಕ್ಕಿತು.



# ಅನರ್ಹತೆ

ಒಂದು ಸಾರಿ ಒಬ್ಬ ರಾಜನಿಗೆ ಅಂಗರಕ್ಷಕನನ್ನು ನಿಯಮಿಸುವ ಭಾರ ಮಂತ್ರಿಯ ಮೇಲೆ ಬಿತ್ತು. ಅಂಗರಕ್ಷಕನಿಗೆ ಬುದ್ಧಿಬಲವೂ, ಖಂಡಬಲವೂ ಅಗತ್ಯವಾಗಿರಬೇಕು.

ಇದಕ್ಕೆ ತಕ್ಕವರು ಯಾರೂ ಸಿಕ್ಕದೆ ಮಂತ್ರಿ ಯಾತನೆ ಪಡಬೇಕಾಯಿತು. ಕಾರಣವೇನೆಂದರೆ ಮಂತ್ರಿಗೆ ಹಿಡಿಸಿದವರು ರಾಜನಿಗೆ ಹಿಡಿಸಲಿಲ್ಲ.

ಈ ಸ್ಥಿತಿಯಲ್ಲಿ ಸೇನಾಪತಿ ಒಬ್ಬ ಮನುಷ್ಯನನ್ನು ಕುರಿತು ಮಂತ್ರಿಯೊಂದಿಗೆ ಹೇಳಿದನು. ಆ ಮನುಷ್ಯನ ಅರ್ಹತೆಗಳು ಮಂತ್ರಿಗೆ ಸರಿ ಕಂಡವು. ಮಂತ್ರಿ ಆತನನ್ನು ಕುರಿತು ರಾಜನಿಗೆ ಹೇಳುತ್ತ "ನಮ್ಮ ಸೇನಾಪತಿ ಕೂಡಾ ಈತನನ್ನು ಅಂಗರಕ್ಷಕ ಪದವಿಗೆ ಆರಿಸಿದ್ದಾನೆ" ಎಂದನು.

ಕೂಡಲೇ ರಾಜನು, "ಇವನಿಗೆ ನಿಜವಾಗಿಯೂ ತಕ್ಕ ಅರ್ಹತೆಗಳಿದ್ದರೆ ಸೇನಾಪತಿ ಏಕೆ ಶಿಫಾರಸು ಮಾಡಬೇಕಾಗಿಬಂತು ? ಇವನು ಅರ್ಹನಲ್ಲ!" ಎಂದನು.





# ವ್ಯರ್ಥೋಪದೇಶ

ಅನೇಕ ವರ್ಷಗಳ ಹಿಂದೆ ಚಕ್ರಧರಪುರವೆಂಬ ಊರಲ್ಲಿ ವಿಷ್ಣುಶರ್ಮನೆಂಬ ತುಂಬ ಬಡವನೊಬ್ಬನಿದ್ದನು. ಅವನ ಹೆಂಡತಿ ದೊಡ್ಡಗಯ್ಯಾಳಿ. ನರಳುವ ನರಿಯ ಮೇಲೆ ತಾಳೇಕಾಯಿ ಬಿದ್ದ ಹಾಗೆ, ಮೊದಲೇ ದಾರಿದ್ರ್ಯದಿಂದ ನರಳಿಕೊಂಡಿರುವ ವಿಷ್ಣುಶರ್ಮನನ್ನು ಹೆಂಡತಿ ದಿನಾ ಬಯ್ಯುತ್ತ, "ನನ್ನ ಕರ್ಮ. ನಿಮ್ಮನ್ನು ಕಟ್ಟಿಕೊಂಡದ್ದಕ್ಕೆ ಪಡಬಾರದ ಕಷ್ಟಪಡಬೇಕಾಯಿತು. ಹೆಂಡತಿಗೆ ಅನ್ನಬಟ್ಟೆ ಕೊಡಲಿಕ್ಕೂ ಸಾಧ್ಯವಿಲ್ಲದ ದರಿದ್ರರಿಗೆ ಮದುವೆ ಏಕೆ ಬೇಕಾತ್ತು?" ಎಂದು ಮರ್ಮಾಘಾತವಾಗಿ ಜರೆದಾಡುತ್ತಿದ್ದಳು.

ಹೆಂಡತಿ ಹೇಳುವ ಮಾತುಗಳಲ್ಲಿ ನಿಜವಿದೆ ಎಂಬುದನ್ನು ತಿಳಿದುಕೊಂಡಿದ್ದ ವಿಷ್ಣುಶರ್ಮ, ಯಾರನ್ನೂ ನಿಂದಿಸಲಾರದಾದನು. ಒಟ್ಟಿನ ಮೇಲೆ ಅವನಿಗೆ ಜೀವನದ ಮೇಲೆಯೇ ವೈರಾಗ್ಯಹುಟ್ಟಿತು. ಕಡೆಗೆ ಒಂದು ದಿನ ಅವನು ಹೆಂಡತಿಗೆ ಹೇಳದೆಯೇ ಮನೆ ಬಿಟ್ಟು ಸನ್ಯಾಸವನ್ನು ಸ್ವೀಕರಿಸಿ ಹೊರಟುಹೋದನು.

ಸಂಸಾರ ಜೀವನಕ್ಕಿಂತ ಸನ್ಯಾಸಿಯ ಜೀವನವು ಎಷ್ಟೋ ಸುಖವೆಂದು ವಿಷ್ಣುಶರ್ಮನು ಅಂದುಕೊಂಡನು. ಸಿಕ್ಕಿದ್ದು ತಿನ್ನುತ್ತ ಯಾವ ಮರದ ಕೆಳಗೋ ಕಣ್ಣುಮುಚ್ಚಿ ಕುಳಿತುಕೊಳ್ಳುವುದರ ಹೊರತು ಸನ್ಯಾಸಿಗೆ ಬೇರೆ ಹೊಣೆಗಾರಿಕೆ ಏನಿಲ್ಲ. ಈ ರಹಸ್ಯವನ್ನು ತಿಳಿಯದೆ ಎಷ್ಟೋ ಮಂದಿ ಸಂಸಾರಿಗಳು ನರಕಪ್ರಾಯವಾದ ಜೀವನದಲ್ಲಿ ನರಳುತ್ತಾರೆಂದೂ, ಅಂಥವರನ್ನೆಲ್ಲಾ ತನ್ನ ಹಿತಬೋಧನೆಗಳಿಂದ ಉದ್ಧರಿಸಬಹುದೆಂದೂ, ಈ ವಿಧವಾಗಿ ಮಾನವರ ಸೇವೆ ಮಾಡಿದರೆ ಜನ್ಮಕ್ಕೆ ಸಾರ್ಥಕವೆಂದೂ ವಿಷ್ಣುಶರ್ಮನು ನಿರ್ಣಯಿಸಿಕೊಂಡನು.

ಅವನು ಶ್ರೀಪುರವೆಂಬ ಗ್ರಾಮಕ್ಕೆ ಹೋದನು. ಅಲ್ಲಿ ಒಂದು ಮನೆಯ ಮುಂದೆ ಅನೇಕ ಜನರು ಸಾಲುಗಟ್ಟಿ ನಿಂತಿರುವುದನ್ನು ನೋಡಿ, ಅಲ್ಲಿಗೆ ಹೋಗಿ, "ಹೀಗೇಕೆ ನಿಂತಿದ್ದೀರಿ?" ಎಂದು ಕೇಳಿದನು.

"ಅಯ್ಯಾ, ಈ ಮನೆ ಬಡ್ಡೀ ಲೇವಾದೇವಿ ನಡೆಸುವ ಸುಬ್ಬಾಶೆಟ್ಟರದು. ಅವರು ನಗ ಮತ್ತು ಇತರ ವಸ್ತುಗಳನ್ನು ಒತ್ತೆ ಇಟ್ಟುಕೊಂಡು ಹಣವನ್ನು ಸಾಲ ಕೊಡುತ್ತಾರೆ. ಅಸಲು ಬಡ್ಡಿ ಚುಕ್ತಾ ತೀರಿಸಿದವರಿಗೆ ಒತ್ತೆ ಇಟ್ಟ ವಸ್ತುಗಳನ್ನು ವಾಪಾಸು ಕೊಡುತ್ತಾರೆ. ಯಾರ ವಸ್ತು ಅವರದು ತೆಗೆದು

ರಾಂಬಾಬು

ಕೊಂಡು ಹೋಗಬಹುದು" ಎಂದು ಸಾಲಿನಲ್ಲಿರುವವರು ಹೇಳಿದರು.

ಕೂಡಲೇ ವಿಷ್ಣುಶರ್ಮ ಸುಬ್ಬಾಶೆಟ್ಟರ ಬಳಿಗೆ ಹೋಗಿ, "ಅಯ್ಯಾ, ನೀವು ಮಾಡುವುದು ಮಹಾ ಪಾಪದ ಕೆಲಸ. ಸತ್ತು ಹೋಗುವಾಗ ಈ ಹಣವು ಹಿಂದೆ ಬರುವುದಿಲ್ಲವಷ್ಟೆ ?" ಎಂದು ಹಿತಬೋಧನೆ ಮಾಡಲು ತೊಡಗಿದನು.

ಸುಬ್ಬಾಶೆಟ್ಟಿ ಅವನನ್ನು ತಡೆದು, "ಎಂಥಾ ಸನ್ಯಾಸಿಯಪ್ಪಾ ನೀನು ? ಈ ವಿಷಯ ನನಗೆ ಗೊತ್ತಿಲ್ಲವೆಂದು ಹೇಳಲಿಕ್ಕೆ ಬಂದೆಯೇನು ? ಹಣ ಸಂಪಾದಿಸಲು ಆಗದವರು ಸನ್ಯಾಸಿಗಳಾಗಿ ಇಂಥಾ ಜಡವೇದಾಂತ ಹೇಳುತ್ತಾರೆ. ನಿನಗೇ ಸಾಕಷ್ಟು ಹಣವಿರುತ್ತಿದ್ದರೆ ಹೀಗೆ ಸನ್ಯಾಸಿಯಾಗುತ್ತಿದ್ದೆಯಾ ?" ಎಂದು ಕೇಳಿದನು. ಶೆಟ್ಟಿಯ ಮಾತಿನಲ್ಲಿ ನಿಜವಿರುವುದೆಂದು ವಿಷ್ಣುಶರ್ಮನಿಗೆ ತೋರಿತು. ಇನ್ನು ಮೇಲೆ ಯಾರಿಗೂ ಹಣದ ವಿಷಯದಲ್ಲಿ ಹಿತಬೋಧೆ ಮಾಡಕೂಡದೆಂದು ತೀರ್ಮಾನಿಸಿಕೊಂಡನು.

ಮರುದಿನ ಅವನು ಧರ್ಮಪುರಿಯನ್ನು ಸೇರಿ, ಸ್ನಾನಮಾಡಲಿಕ್ಕಾಗಿ ಅಲ್ಲಿರುವ ನದಿಯ ಕಡೆಗೆ ಹೋದನು.

ನದಿಯ ಬದಿಯಲ್ಲಿ ಏನೋ ದಿಗಿಲು ಬಡಿದವನ ಹಾಗೆ ಕುಳಿತಿದ್ದ ಒಬ್ಬ ಮನುಷ್ಯನನ್ನು ನೋಡಿ, ಆತನ ಚಿಂತೆಗೆ ಕಾರಣವೇನೆಂದು ಕೇಳಿದನು.

"ಅದನ್ನೇನು ಹೇಳಲಯ್ಯಾ, ನಾನೂ ನನ್ನ ಹೆಂಡತಿಯೂ ದೋಣಿಯಲ್ಲಿ ಕುಳಿತು ಈ ನದಿಯನ್ನು ದಾಟುತ್ತಿದ್ದಾಗ ಮಧ್ಯದಲ್ಲಿ ಸುಳಿಗೆ ಸಿಕ್ಕಿ ದೋಣಿ ಮುಳುಗಿ ನನ್ನ ಹೆಂಡತಿ ಸತ್ತುಹೋದಳು. ನಾನೊಬ್ಬ ಈಜಾಡಿ ಹೇಗೋ ಬದುಕಿ ದಡ ಸೇರಿದೆ. ನನ್ನ ಹೆಂಡತಿಯನ್ನು ಬಿಟ್ಟು ಇನ್ನು ಹೇಗೆ ಬದುಕಬೇಕೋ ಗೊತ್ತಾಗುವುದಿಲ್ಲ" ಎಂದು ಹೇಳಿ ಆ ಮನುಷ್ಯ ಅಳಲಿಕ್ಕೇ ಶುರು ಮಾಡಿದನು.

ಇಂತಹ ಮನುಷ್ಯನಿಗೆ ವೈರಾಗ್ಯವನ್ನು ಬೋಧಿಸಬಹುದು ಎಂದುಕೊಂಡು, ವಿಷ್ಣುಶರ್ಮನು ಅವನೊಂದಿಗೆ, "ಅಪ್ಪಾ, ನನ್ನ ಮಾತು ಕೇಳು. ಈ



ಬಂಧುತ್ವಗಳಾವುದೂ ಶಾಶ್ವತವಾದುದಲ್ಲ. ನಿನ್ನ ಹೆಂಡತಿ ತೀರಿಹೋದಳೆಂದು ನೀನೇನೋ ದುಃಖಿಸುತ್ತಿರುವಿ. ಯೋಚಿಸಿದರೆ ಇದು ಕೇವಲ ಅಜ್ಞಾನವೆಂದು ಗೊತ್ತಾಗುತ್ತದೆ. ಒಂದುವೇಳೆ ನೀನೇ ಸತ್ತು ಹೋಗಿ ನಿನ್ನ ಹೆಂಡತಿಯೇ ಬದುಕಿದಳೆಂದುಕೋ, ಆಗ ಅವಳು ನಿನಗಾಗಿ ಹೀಗೆ ಅಳುತ್ತಾ ಕುಳಿತುಕೊಳ್ಳುವಳೆಂದು-ಹೇಗೆ ಹೇಳುವಿ?" ಎಂದನು.

ಅಷ್ಟರಲ್ಲಿ ಆ ಮನುಷ್ಯನಿಗೆ ಸಿಟ್ಟು ಬಂದು, "ನನ್ನ ಹೆಂಡತಿಯ ಸಂಗತಿ ನಿನಗೇನು ಗೊತ್ತಿದೆ ಎಂದು ಹೀಗೆ ಬೊಗಳುತ್ತೀಯಾ? ಹೆಂಡತಿಯ ಪ್ರೇಮವೆಂದರೆ ಹೇಗಿದೆಯೆಂದು ಸ್ವಲ್ಪಾದರೂ ಗೊತ್ತಿದ್ದವನಾದರೆ ಹೀಗೆಲ್ಲಾ ಹೇಳುವೆಯೇನು? ಅಸಲು ನೀನು ಸನ್ಯಾಸಿಯಾಗುತ್ತಿದ್ದೆಯಾ?" ಎಂದು ವಿಷ್ಣುಶರ್ಮನನ್ನು ಬಿಸಿಬಿಸಿ ಮಾತುಗಳಿಂದ ಹೀಯಾಳಿಸಿದನು. ಅದರಲ್ಲಿಯೂ ನಿಜವಿರುವುದೆಂದು ವಿಷ್ಣುಶರ್ಮನಿಗೆ ತೋರಿತು. ಇನ್ನು ಯಾರಿಗಾದರೂ ಬೋಧನೆ ಮಾಡುವಾಗ ತನಗೆ ವೈರಾಗ್ಯ ಬಂದುದರ ಕಾರಣವನ್ನು ಎತ್ತಲೇ ಬಾರದು ಎಂದುಕೊಂಡನು.

ಆಮೇಲೆ ಅವನು ಅಲ್ಲಿಂದ ಚಂದ್ರಗಿರಿಗೆ ಹೋಗಿ ಅಲ್ಲಿ ಒಬ್ಬ ಕಟುಕರವನನ್ನು ನೋಡಿದನು. ಅವನು ಆಗಲೇ ಒಂದು ಮೇಕೆಯನ್ನು ಕೊಂದು ಅದರ ಚರ್ಮವನ್ನು ಸುಲಿದು, ಮಾಂಸವನ್ನು ಬೇರೆ ಬೇರೆಯಾಗಿ ವಿಂಗಡಿಸಿ ಮಾರಲಿಕ್ಕೆ ಇಡುತ್ತಿದ್ದನು. ವಿಷ್ಣುಶರ್ಮನು ಆ ಕಟುಕರವನ ಬಳಿಗೆ ಹೋಗಿ, "ಏನಪ್ಪಾ, ನನ್ನ ಮಾತು ಕೇಳು. ಜೀವಹಿಂಸೆ ಮಹಾಪಾಪ. ನೀನು ಈ ಮೇಕೆಯನ್ನು ಕೊಂದು ಅದರ ಮಾಂಸ ಮಾರಿ, ಬಂದ ಹಣದಿಂದ ಹೊಟ್ಟೆ ತುಂಬಿಸಿಕೊಳ್ಳುವೆ. ಇದರ ಫಲಿತವಾಗಿ ಬರುವ ಜನ್ಮದಲ್ಲಿ ದೇವರು ನಿನ್ನನ್ನು ಮೇಕೆಯಾಗಿ ಹುಟ್ಟಿಸಿ, ಈ ಮೇಕೆಯನ್ನು ಕಟುಕರವನನ್ನಾಗಿ ಹುಟ್ಟಿಸಿ, ಈಗ ನೀನು ಮೇಕೆಯನ್ನು ಮಾಡಿದ ಹಾಗೆಯೇ ಅದರಿಂದ ನಿನ್ನನ್ನೂ ಮಾಡಿಸುತ್ತಾನೆ" ಎಂದನು.

ಆ ಮಾತು ಕೇಳಿ ಕಟುಕರವನು ಬಿದ್ದುಬಿದ್ದು ನಕ್ಕು "ಅಯ್ಯಾ, ಹುಚ್ಚು ಸನ್ಯಾಸಿಗಳೇ! ಹಿಂದಿನ ಜನ್ಮದಲ್ಲಿ ನಾನೇ ಮೇಕೆಯಾಗಿದ್ದೆ. ಈ ಮೇಕೆಯೇ ಕಟುಕನಾಗಿ ನನ್ನನ್ನು ಕೊಂದಿತ್ತು. ಆದುದರಿಂದ ಭಗವಂತನು ಈಗ ನನ್ನಿಂದ ಅದನ್ನು ಕೊಲ್ಲಿಸಿದ್ದಾನೆ ಗೊತ್ತಾ?" ಎಂದು ಮತ್ತೆ ಮಾಡು ಹಾರುವ ಹಾಗೆ ನಕ್ಕನು. ಸುತ್ತಲಿದ್ದವರೂ ನಕ್ಕರು.

ಅವನು ಹೇಳಿದುದನ್ನು ಅಲ್ಲವೆನ್ನಲು ಸಾಧ್ಯವಿಲ್ಲದೆ ವಿಷ್ಣುಶರ್ಮನು ಮಾತಾಡದೆ ಅಲ್ಲಿಂದ ಹೊರಟನು. ಇನ್ನು ಮೇಲೆ ಹಿತಬೋಧನೆಗಳಿಂದ ಜನರನ್ನು ದುರಸ್ತಿಮಾಡಲು ಸಾಧ್ಯವಿಲ್ಲವೆಂದುಕೊಂಡು ಸುಮ್ಮನಾಗಿಬಿಟ್ಟನು.



# ಜೋಯಿಸನ ಆರಿಕೆ

ಅವಂತೀ ರಾಜನ ಆಸ್ಥಾನದಲ್ಲಿದ್ದ ಜೋಯಿಸನು ಕಾಲಧರ್ಮದಂತೆ ತೀರಿಹೋದನು. ಇನ್ನು ಹೊಸ ಜೋಯಿಸನನ್ನು ಆರಿಸಬೇಕಾಯಿತು. ಆಸ್ಥಾನದ ಜೋಯಿಸನ ಸ್ಥಾನಕ್ಕೆ ರಾಜನು ತನ್ನ ನಿಷ್ಪಕ್ಷಪಾತವನ್ನು ತೋರಿಸಲಿಕ್ಕಾಗಿ, ಆಸ್ಥಾನಕ್ಕೆ ಜೋಯಿಸನನ್ನು ಆರಿಸಲಾಗುವುದೆಂದು, ಯಾರು ಬೇಕಾದರೂ ಬರಬಹುದೆಂದು ದೇಶದಲ್ಲೆಲ್ಲ ಡಂಗುರ ಹೊಡೆಸಿದನು.

ನೂರಾರು ಮಂದಿ ಜೋಯಿಸರು ರಾಜನ ಮನೆಗೆ ಬಂದು ಕೂಡಿದರು.

ರಾಮಶರ್ಮನು ಮಾತ್ರ ಬರಲಿಲ್ಲ.

ರಾಜನು ರಾಮಶರ್ಮನನ್ನು ಕರೆಯಿಸಿ, "ಜೋಯಿಸರನ್ನು ಆರಿಸುವ ಸ್ಪರ್ಧೆಗೆ ನೀನೇಕೆ ಬರಲಿಲ್ಲ ?" ಎಂದು ಕೇಳಿದನು.

"ನಾನೇ ಆರಿಸಲ್ಪಡುವೆನೆಂದು ನನಗೆ ಗೊತ್ತಿದ್ದುದರಿಂದಲೇ ನಾನು ಬರಲಿಲ್ಲ. ತಾವೆಲ್ಲರೂ ಬಂದ ದಾರಿಯಲ್ಲೇ ಹಿಂದಿರುಗಬೇಕಾಗುವುದೆಂದು ತಿಳಿಯಲಾಗದ ಈ ಜೋಯಿಸರು ಎಂಥ ಜೋಯಿಸರೋ ನನಗಂತೂ ಅರ್ಥವಾಗುವುದಿಲ್ಲ" ಎಂದ ರಾಮಶರ್ಮ.

ಮತ್ತೇನಿದೆ ? ಬಂದ ಜೋಯಿಸರೆಲ್ಲಾ ತಲೆಯೆತ್ತದೆ ಹೊರಟುಹೋದರು. ರಾಮಶರ್ಮ ಆಸ್ಥಾನದ ಜೋಯಿಸನಾಗಿ ನಿಯಮಿಸಲ್ಪಟನು.



# ಮೊಳಕೆ ಚಿವುಟಿದವನು!

ಒಬ್ಬ ಲೋಭಿಯಾದ ಜಮೀನ್ದಾರನ ಹತ್ತಿರ ಸುಂದರಮ್ಮ ಎಂಬ ಅಡಿಗೆ ಹೆಂಗಸಿದ್ದಳು. ಅವಳ ಮಗ ರಾಮ ತೋಟದ ಕೆಲಸ ಮಾಡುತ್ತಿದ್ದ. ತಾಯಿ ಮಗಂದಿರಿಗೆ ಏನಾದರೂ ಕಾಯಿಲೆ ಬಂದರೆ ಜಮೀನ್ದಾರನು ಸಹಾಯ ಮಾಡುವುದಿರಲಿ, ಸಂಬಳವನ್ನೂ ಮುರಿದುಕೊಳ್ಳುತ್ತಿದ್ದನು.

ಜಮೀನ್ದಾರನಿಗೆ ಸ್ವಲ್ಪ ಬೀಳುಭೂಮಿಯೂ ಇತ್ತು. ಅಲ್ಲಿ ಸಾಗುವಳಿ ಮಾಡಲು ತುಂಬಾ ಖರ್ಚು ಮಾಡಬೇಕಿತ್ತು. ಅದಕ್ಕೆ ಇಷ್ಟವಿಲ್ಲದೆ ಜಮೀನ್ದಾರನು ಅದನ್ನು ಬೀಳು ಬಿಟ್ಟಿದ್ದನು. ಇಪ್ಪತ್ತು ಎಕರೆಯಷ್ಟಿರುವ ಆ ಸ್ಥಳದಲ್ಲಿ ತನಗೆ ಎರಡು ಎಕರೆ ಕೊಟ್ಟರೆ ಸಾಗುವಳಿ ಮಾಡಿಕೊಂಡಿರುತ್ತೇನೆಂದು ರಾಮನು ಕೇಳಿದುದಕ್ಕೆ ಜಮೀನ್ದಾರನು ಕೊಡಲಿಲ್ಲ.

ಒಂದು ದಿನ ರಾಮನು ಜಮೀನ್ದಾರನೊಂದಿಗೆ "ಆ ಬೀಳು ಬಿದ್ದ ಸ್ಥಳದಲ್ಲಿ ಕಪ್ಪು ಬಂಡೆಯ ಹತ್ತಿರ ನಿಧಿಯಿದೆ ಅಂತ ಆಗಾಗ ನನಗೆ ಕನಸು ಬೀಳುತ್ತೆ. ಅದನ್ನು ಅಗೆದು ತೆಗೆದುಕೊಂಡು, ಆ ಹಣದಿಂದ ಹೊಲ ಕೊಂಡುಕೊಳ್ಳುತ್ತೇನೆ. ಒಪ್ಪಿಗೆ ಕೊಡಿ" ಎಂದು ಕೇಳಿದನು.

"ಆ ನಿಧಿ ತೆಗೆದು ನನಗೇ ಕೊಡು. ನಿನಗೆ ಎರಡು ಎಕರೇ ಸ್ಥಳ ನಾನೇ ಕೊಡುತ್ತೇನೆ" ಎಂದ ಜಮೀನ್ದಾರ.

ರಾಮನು ಒಂದು ಮಣ್ಣಿನ ಕೊಡದಲ್ಲಿ ಗಾಜಿನ ತುಂಡು ಹೆಂಚಿನ ತುಣುಕುಗಳನ್ನು ತುಂಬಿಸಿ, ಬೆಸುಗೆಯ ಮುಚ್ಚಳದಿಂದ ಬಂದು ಮಾಡಿ, ಕಪ್ಪು ಬಂಡೆಯ ಹತ್ತಿರ ಹೂಗಿದಿಟ್ಟನು. ಆ ಕೊಡದ ಮೇಲೆ "ಇದು ದೊರಕಿದ ಐದು ವರುಷಗಳ ಮೇಲೆ ತೆರೆಯಬೇಕು. ತಪ್ಪಿದಲ್ಲಿ ಮೊಳಕೇ ಚಿವುಟಿದವನ ಗತಿ ಬರುತ್ತೆ." ಎಂದು ಬರೆದಿದ್ದನು. ತರುವಾಯ ಜಮೀನ್ದಾರನ ಸಮಕ್ಷಮದಲ್ಲೇ ಅಗೆದು ಆ ಕೊಡವನ್ನು ತೆಗೆದು ಜಮೀನ್ದಾರ ನಿಗೆ ಕೊಟ್ಟನು.

ಅದನ್ನು ಐದು ವರುಷಗಳ ನಂತರವೇ ತೆರೆಯೋಣವೆಂದು ಜಮೀನ್ದಾರನು ಅದನ್ನು ಭದ್ರಪಡಿಸಿಟ್ಟು, ರಾಮನಿಗೆ ಎರಡು ಎಕರೆ ಸ್ಥಳವನ್ನು ಕೊಟ್ಟನು. ರಾಮನು ಕಷ್ಟಪಟ್ಟು ಕೆಲಸ ಮಾಡಿ ಆ ಭೂಮಿಯ ಫಸಲಿ ನಿಂದ ಮೇಲೆ ಬರುತ್ತಿದ್ದನು.

ಜಮೀನ್ದಾರನ ಮಗನು ತನ್ನ ಸ್ವಂತ ದುಂದುಖರ್ಚಿಗಾಗಿ ತಂದೆಯಿಂದ ಹಣ ಬರಿಸಿಕೊಳ್ಳಲಾಗದೆ ತಂದೆಗೆ ಗೊತ್ತಾಗದಂತೆ ಆ ನಿಧಿಯ ಕೊಡವನ್ನು ತೆಗೆದು, ಅದರೊಳಗಿರುವುದನ್ನು ನೋಡಿ ದಂಗಾದನು.

"ಮೊಳಕೆ ಚಿವುಟಿದವನ ಗತಿ ಬರುವುದೆಂದರೆ ಇದೇ ಅಂತ ಕಾಣುತ್ತೆ!" ಎಂದು ಮಗನನ್ನು ಬೈಯುತ್ತ ಹಣೆ ಚಚ್ಚಿಕೊಂಡನು ಜಮೀನ್ದಾರ.



# ಮಹಿಷಾಸುರಮರ್ದಿನಿ



ಒಂದು ಕಾಲದಲ್ಲಿ ರಾಕ್ಷಸರಿಗೆಲ್ಲ ರಾಜನಾಗಿದ್ದ ಮಹಿಷಾಸುರನು, ಬೇಕೆಂದಾಗ ಭಯಂಕರವಾದ ಕೋಣವಾಗಿ ಮಾರ್ಪಡುತ್ತಿದ್ದನು. ಅವನು ಅತ್ಯಂತ ಕ್ರೂರನಾಗಿ, ಎಂಥವರಿಗೂ ಅಜೇಯನಾಗಿದ್ದನು.

ಅವನು ನೂರು ವರ್ಷಗಳ ವರೆಗೆ ದೇವತೆಗಳನ್ನು ಹಿಂಸಿಸುತ್ತ, ಕಡೆಗೆ ಅವರನ್ನು ಸ್ವರ್ಗದಿಂದಲೇ ಓಡಿಸಿದನು. ದೇವತೆಗಳು ಭೂಮಿಯಲ್ಲಿ ಅಡಗಿ ಕೊಂಡರು.





ಕೆಲಮಂದಿ ದೇವತೆಗಳು ಬ್ರಹ್ಮ ವಿಷ್ಣು ಮಹೇಶ್ವರರ ಬಳಿಗೆ ಹೋಗಿ ಮಹಿಷಾಸುರನನ್ನು ಕೊಲ್ಲುವ ದಾರಿಯನ್ನು ನೋಡಬೇಕೆಂದು ಕೇಳಿಕೊಂಡರು.


ತ್ರಿಮೂರ್ತಿಗಳ ಕ್ರೋಧಾನಲವು ಮಹಾಜ್ವಾಲೆಯಾಗಿ ಆಕಾಶದಷ್ಟೆತ್ತರಕ್ಕೆ ಹೋಯಿತು. ಅದರೊಳಗಿನಿಂದ ದುರ್ಗಾದೇವಿ ಉದ್ಭವಿಸಿದಳು. ಶಿವನು ಅವಳ ಮುಖದಲ್ಲಿ ತನ್ನ ಶಕ್ತಿಯನ್ನು ತುಂಬಿದನು: ಅವಳ ಕೂದಲುಗಳಲ್ಲಿ ಯಮಶಕ್ತಿ ಸೇರಿತು. ಅವಳ ನಾಲ್ಕು ಕೈಗಳೂ ವಿಷ್ಣು ಶಕ್ತಿಯಿಂದ ಬಲವಾದುವು. ಬ್ರಹ್ಮ ಅವಳ ಕಾಲುಗಳನ್ನೂ, ಅಗ್ನಿ ಕಣ್ಣುಗಳನ್ನೂ ಶಕ್ತವಾಗಿಸಿದರು. ಇತರ ದೇವತೆಗಳು ಬಗೆಬಗೆಯ ಆಭರಣಗಳನ್ನೂ, ಆಯುಧಗಳನ್ನೂ ಕೊಟ್ಟರು.



ಅವಳು ರಾಕ್ಷಸರ ಮೇಲೆ ಯುದ್ಧಕ್ಕೆ ಹೊರಟಳು. ಅದನ್ನು ತಿಳಿದು ರಾಕ್ಷಸರು ಅವಳೊಂದಿಗೆ ಹೋರಾಡಲು ಸಿದ್ಧರಾದರು. ಆದರೆ ದೇದೀಪ್ಯ ಮಾನವಾದ ಅವಳ ಆಕಾರವನ್ನು ನೋಡಿ ಹೆದರಿ, ಅವರು ತಮ್ಮ ಒಡೆಯನ ಬಳಿಗೆ ಓಡಿದರು.



ರಾಕ್ಷಸ ಸೇನಾಪತಿಗಳು ತಮ್ಮ ಸೇನೆಗಳನ್ನು ದೇವಿಯ ಮೇಲೆ ಕಳುಹಿಸಿದರಾದರೂ, ದಾರಿ ಯಲ್ಲಿ ಅನೇಕ ಮಂದಿ ರಾಕ್ಷಸರು, ದೇವಿಯ ವಾಹನವಾದ ಸಿಂಹಕ್ಕೂ ದೇವಿಯ ಕೈಯಲ್ಲಿದ್ದ ತ್ರಿಶೂಲಕ್ಕೂ ಬಲಿಯಾಗಿ ಹೋದರು.



ತನ್ನ ಸೇನೆಗಳೂ ಸೇನಾಪತಿಗಳೂ ಸತ್ತರೆಂಬು ದನ್ನು ಕೇಳಿ ಮಹಿಷಾಸುರನು, ಕೋಪದಿಂದ ಕಿಡಿಕಾರಿಸುತ್ತಾ, ಕಾಡುಕೋಣದ ರೂಪ ತಾಳಿ ದುರ್ಗೆಯ ಕಡೆಗೆ ಹೋದನು. ಅವಳು ಕೂಡಲೇ ಅವನ ತಲೆಯನ್ನು ಬಿಂಡಿಸಿಬಿಟ್ಟಳು.



ಆಗ ಮಹಿಷಾಸುರನು ಆನೆಯ ರೂಪವನ್ನು ಧರಿಸಿ, ದುರ್ಗೆಯ ವಾಹನವಾದ ಸಿಂಹವನ್ನು ಹಿಡಿಯಲು ಹೋದನು. ದೇವಿ ಆನೆಯ ಸೊಂಡಿಲನ್ನು ಕಡಿದಳು.



ಕೂಡಲೇ ಮಹಿಷಾಸುರನು ತನ್ನ ನಿಜರೂಪದಿಂದ ದುರ್ಗಾದೇವಿಯನ್ನು ಇದಿರಿಸಿದನು. ದೇದೀಪ್ಯಮಾನವಾದ ಅವಳ ಶರೀರಕಾಂತಿಗೆ ಅವನ ಕಣ್ಣುಗಳು ಚದರುತ್ತಿರಲು ನಿಂತು ಯುದ್ಧ ಮಾಡಲಾರದೇ ಹೋದನು.



ದೇವಿ ತನ್ನ ಸಿಂಹ ಸಮೇತ ಅವನ ಮೇಲೆ ಲಂಘಿಸಿ, ತನ್ನ ತ್ರಿಶೂಲದಿಂದ ಹತ ಮಾಡಿಬಿಟ್ಟಳು. ಅದರಿಂದ ಮೂರು ಲೋಕಗಳಿಗೂ ಶಾಂತಿ ಲಭಿಸಿತು.



# ಮೋಸದಲ್ಲಿ ನ್ಯಾಯ

ನವರಂಗಪುರದಲ್ಲಿದ್ದ ನಾರಾಯಣನಿಗೆ, ಏನೋ ಒಂದು ಅಗತ್ಯಕಾರ್ಯಕ್ಕಾಗಿ ದೂರದಲ್ಲಿದ್ದ ಒಂದು ಊರಿಗೆ ಹೋಗಬೇಕಾಯಿತು. ಅಲ್ಲಿ ಕೆಲಸ ಮುಗಿಸಿಕೊಳ್ಳಲು ಅವನಿಗೆ ಒಂದು ದಿನ ಹಿಡಿಯಿತು. ಮರುದಿನ ತನ್ನ ಊರಿಗೆ ಹಿಂದಿರುಗಲು ಅವನಿಗೆ ಗಾಡಿಯೇ ಸಿಗಲಿಲ್ಲ. ಎತ್ತಿನ ಗಾಡಿ ಸಿಕ್ಕಿದರೂ ಸಾಕೆಂದು ನೋಡಿದರೆ ಅದೂ ಸಿಕ್ಕಲಿಲ್ಲ. ಅದಕ್ಕಾಗಿ ಕಾದು ಪ್ರಯೋಜನವಿಲ್ಲವೆನಿಸಿದ ಮೇಲೆ, ದಾರಿಯಲ್ಲಿ ಯಾವುದಾದರೂ ಗಾಡಿ ಸಿಕ್ಕಬಹುದು ಎಂದುಕೊಂಡು ಕಾಲು ನಡಿಗೆಯಿಂದಲೇ ಹೊರಟನು.

ಸ್ವಲ್ಪ ದೂರ ಹೋದಾಗ ಒಂದುಕಡೆ ಖಾಲಿಯಾದ ಕುದುರೇಗಾಡಿ ನಿಂತಿರುವುದನ್ನು ನೋಡಿದನು. ಕುದುರೆಯನ್ನು ಒಂದು ಮರಕ್ಕೆ ಕಟ್ಟಿಹಾಕಲಾಗಿತ್ತು. ಗಾಡಿ ಹೊಡೆಯುವವನು ಗಾಡಿಯ ಹತ್ತಿರ ಒರಗಿ ತೂಕಡಿಸಿಕೊಂಡಿದ್ದನು. ನಾರಾಯಣನು ಹತ್ತಿರ ಹೋಗಿ ನೋಡಿದ ಕೂಡಲೇ ಆ ಗಾಡಿಯ ವಿಷಯದಲ್ಲಿ ಹತಾಶನಾದನು, ಮರದಕೆಳಗೆ ಮಲಗಿದ್ದವನು ಅವನ ಊರಿನವನೇ ಆದ ದೊಡ್ಡೇಗೌಡನೇ. ಗಾಡಿಯೂ ಅವನದೇ. ದೊಡ್ಡೇಗೌಡ ಪರಮ ಲೋಭಿ ಮಾತ್ರವಲ್ಲ, ತನಗಿಂತ ಕಡಿಮೆಯವರನ್ನು ತನ್ನ ಗಾಡಿಯಲ್ಲಿ ಹತ್ತಿಸಿಕೊಳ್ಳುವವನಲ್ಲ. ಒಂದು ವೇಳೆ ಹತ್ತಿಸಿಕೊಂಡರೂ ಇಮ್ಮಡಿ ಹಣ ವಸೂಲು ಮಾಡುವವನು. ಆದುದರಿಂದ ತನಗೆ ಆ ಗಾಡಿಯಲ್ಲಿ ಹತ್ತಿಕೊಳ್ಳಲು ಸಾಧ್ಯವಿಲ್ಲವೆಂದುಕೊಂಡು ಮಾತಾಡದೆ ಮುಂದಕ್ಕೆ ಸಾಗಿಹೋದನು. ಆಗ ಅವನಿಗೊಂದು ಆಲೋಚನೆ ಬಂದಿತು. ಅದನ್ನೇ ಅಮಲುಗೊಳಿಸಿದನು.

ಮುಂದೆ ಸ್ವಲ್ಪ ಹೊತ್ತಿನ ಮೇಲೆ ದೂರದಲ್ಲಿ ಕುದುರೆಯ ಹೇಂಕೃತಿಯ ಶಬ್ದ ಕೇಳಿ ಬಂತು. ಕೂಡಲೇ ಗಾಡಿ ಹೊಡೆಯುವವನೂ, ದೊಡ್ಡೇಗೌಡನೂ ಎದ್ದು ಕುಳಿತು ನೋಡಿದರು. ತಮ್ಮ ಕುದುರೆ ಸುಮ್ಮನೆ ಹುಲ್ಲು ಮೇಯುತ್ತಾ ಇರುವುದನ್ನು ನೋಡಿ, ಮತ್ತೆ ಮಲಗಿದರು. ಅಷ್ಟರಲ್ಲಿ ದೂರದಲ್ಲಿ ಕುದುರೆಯ ಹೇಂಕೃತಿಯ ಶಬ್ದ ಪುನಃ ಕೇಳಿಸಿತು. ಅದನ್ನು ಕೇಳಿ ದೊಡ್ಡೇಗೌಡನ ಕುದುರೆಯೂ ಒಂದು ಸಾರಿ ಸಕಿಲಿಸಿ ಪ್ರತ್ಯುತ್ತರ ಕೊಟ್ಟಿತು. ಈಗ ಗಾಡಿ ಹೊಡೆಯುವವನು ಎದ್ದು ಕುಳಿತು ನೋಡತೊಡಗಿದನು.

ಎಸ್. ಸಂಜೀವರಾವ್

ಆ ಸಮಯದಲ್ಲಿ ಕುದುರೆಯ ಖುರಪುಟ ಶಬ್ದವು ಸ್ವಲ್ಪ ಸ್ವಲ್ಪವಾಗಿ ಕೇಳಿಬರತೊಡಗಿತು. ಅಷ್ಟರಲ್ಲಿ ನಾರಾಯಣನು ಗಾಬರಿಯಿಂದ ಓಡುತ್ತಾ ಬಂದು, ಅವಸರವಸರವಾಗಿ ದೊಡ್ಡೇಗೌಡನನ್ನು ಎಬ್ಬಿಸಿ, "ಏಳೇಳಿ! ಕಳ್ಳರು! ಕಳ್ಳರು! ಪಕ್ಕದ ಕಾಡಿನಲ್ಲಿ ಕುದುರೆಗಳ ಮೇಲೆ ಬರುತ್ತಿದ್ದಾರೆ, ಗಾಡಿ ಕಟ್ಟಿ ಬೇಗ ಹೊರಡಿ! ಹೊರಡಿ!" ಎಂದನು ತೇಕುತ್ತಾ.

ಗಾಡಿಗಾರ ಕ್ಷಣ ಮಾತ್ರದಲ್ಲಿ ಗಾಡಿಗೆ ಕುದುರೆ ಕಟ್ಟಿದನು. ನಾರಾಯಣನು ದೊಡ್ಡೇಗೌಡನನ್ನು ಗಾಡಿಯೊಳಗೆ ನೂಕಿ, ತಾನು ಕೂಡಾ ಹತ್ತಿಕೊಂಡನು, ಛುಳ್ಳ ಛುಳ್ಳನೆ ಚಾಟೀ ಏಟು ಬಿದ್ದಕೂಡಲೇ ಕುದುರೆ ಶರವೇಗದಿಂದ ಓಡತೊಡಗಿತು. ನಾರಾಯಣನು ಗಾಡಿಯೊಳಗೆ ತೂರಿಕೊಂಡುದನ್ನು ತಡೆಯಬೇಕೆಂದು ದೊಡ್ಡೇಗೌಡನಿಗೆ ತೋರಲೇ ಇಲ್ಲ. ಆಗ ಅವನ ಮನಸ್ಸಿನಲ್ಲಿ ಕಳ್ಳರ ಭಯದ ಹೊರತು ಮತ್ತಾವುದಕ್ಕೂ ಜಾಗವಿರಲಿಲ್ಲ.

ಗಾಡಿ ನವರಂಗಪುರವನ್ನು ತಲಪಿ ದೊಡ್ಡೇಗೌಡನ ಮನೆ ಬಂದ ಕೂಡಲೇ ನಾರಾಯಣನು ಗಾಡಿಯಿಂದ ಇಳಿದು ತನ್ನ ಮನೆಗೆ ಹೋದನು. ದೊಡ್ಡೇಗೌಡನು ಸಾವಧಾನದ ಉಸಿರುಬಿಟ್ಟು, ತನ್ನ ಧನದ ಗಂಟನ್ನು ಎತ್ತಿಕೊಂಡು, ತನ್ನ ಮನೆಯೊಳಗೆ ಹೋಗಿ ಭದ್ರಪಡಿಸಿದನು.

ತರುವಾಯ ಗಾಡಿಗಾರನು ಕುದುರೆಯನ್ನು ಬಿಚ್ಚಿ, ಅದಕ್ಕೆ ದಾಣೆ ಹಾಕಿ, ಗಾಡಿಯನ್ನು ಶುಭ್ರ ಮಾಡಿಕೊಂಡಿದ್ದಾಗ ಅದರಲ್ಲೊಂದು ಚಿಕ್ಕ ಪೊಟ್ಟಣವಿರುವುದನ್ನು ನೋಡಿದನು. ಗೌಡರು ಮರೆತರೇನೋ ಎಂದುಕೊಂಡು ಅದನ್ನು ತೆಗೆದುಕೊಂಡು ಹೋಗಿ ತನ್ನ ಒಡೆಯನಿಗೆ ಕೊಟ್ಟನು.

ಗೌಡನು ಆ ಪೊಟ್ಟಣವನ್ನು ಬಿಡಿಸಿ ನೋಡಲು. ಸ್ವಲ್ಪ ಚಿಲ್ಲರೆ ದುಡ್ಡೂ, ಒಂದು ಕಾಗದವೂ ಇದ್ದುವು. ಆ ಕಾಗದದಲ್ಲಿ ಹೀಗೆ ಬರೆಯಲಾಗಿತ್ತು.

"ಅಯ್ಯಾ ದೊಡ್ಡೇಗೌಡರೇ, ನನ್ನನ್ನು ನೀವು ಕ್ಷಮಿಸಬೇಕು. ನನಗೆ ನಮ್ಮೂರಿಗೆ ಬರಲು ಗಾಡಿಯೇ ಸಿಕ್ಕಲಿಲ್ಲ. ನಿಮ್ಮ ಗಾಡಿಯಲ್ಲಿ ಪ್ರಯಾಣ ಮಾಡಲು ಸಾಧ್ಯವಾಗುವ ಹಾಗೆ ನನ್ನ ಕೈಲಾದ ವಿದ್ಯೆಯನ್ನು ಉಪಯೋಗಿಸಿದೆನು. ನನಗೆ ನಾಯಿಗಳ ಬೊಗಳಿಕೆ, ನರಿಗಳ ಊಳು, ಕುದುರೆಯ ಸಕಿಲಿಕೆ, ಖುರಪುಟ ಶಬ್ದ ಮುಂತಾದ ಧ್ವನಿಗಳನ್ನು ಬಾಯಿಯಿಂದಲೇ ಮಾಡಲು ಗೊತ್ತು. ಕಳ್ಳರು ಬರುವರೆಂದು ನಿಮ್ಮನ್ನು ನಂಬಿಸಿ ಮೋಸಪಡಿಸಿ ನಿಮ್ಮ ಗಾಡಿಯಲ್ಲಿ ಊರು ಸೇರಿದೆನು. ಆದರೂ ನಿಮ್ಮ ಋಣ ಇಟ್ಟುಕೊಳ್ಳಲಾರೆ. ನೀವು ವಸೂಲು ಮಾಡುವಷ್ಟಲ್ಲದಿದ್ದರೂ ನ್ಯಾಯವಾಗಿ ಕೊಡತಕ್ಕ ಬಾಡಿಗೆ ಹಣ ಇದರೊಂದಿಗೆ ಇಟ್ಟಿದ್ದೇನೆ ಸ್ವೀಕರಿಸಬೇಕು."



# ಏಕಲಕ್ಷ್ಯ

ಮಹಾಕವಿ ವರರುಚಿಗೆ ಅನೇಕ ಮಗಂದಿರು. ಅವರು ಬೇರೆಬೇರೆ ಕುಲದ ಸ್ತ್ರೀಯರಿಗೆ ಹುಟ್ಟಿದವರು. ಅವರಲ್ಲಿ ಹೀನಜಾತಿಯ ಮಗನು, ತನ್ನ ಅಣ್ಣನಾದ ಬ್ರಾಹ್ಮಣನ ದರ್ಶನಕ್ಕೆ ಬಂದು ಮನೆಯ ಹತ್ತಿರವಿದ್ದ ನದಿಯ ಬದಿಯ ಹೊಯಿಗೆಯಲ್ಲಿ ನಿಂತನು.

ಶ್ರಾದ್ಧದ ದಿನಹೊರತು ಅವನು ಆ ಮನೆಗೆ ಪ್ರವೇಶಿಸಬಾರದಾಗಿತ್ತು.

ಅಲ್ಲಿ ನಿಂತ ಅವನು ಸೇವಕನ ಹತ್ತಿರ, ಅಣ್ಣ ಏನು ಮಾಡುತ್ತಿದ್ದಾನೆಂದು ಕೇಳಿದನು. "ವಿಷ್ಣು ಪೂಜೆಯಲ್ಲಿದ್ದಾರೆ" ಎಂದ ಸೇವಕ.

ಕೆಳಜಾತಿಯ ಮಗನು ಹೊಯಿಗೆಯಲ್ಲಿ ಹೊಂಡ ತೋಡುತ್ತಾ ಕುಳಿತನು. ಮತ್ತೆ ಸ್ವಲ್ಪ ಹೊತ್ತಿನ ಮೇಲೆ ಸೇವಕನು ಬಂದು, ಯಜಮಾನರು ಶಿವಪೂಜೆ ಮಾಡುತ್ತಾರೆಂದು ಹೇಳಿದನು. ಕಡಿಮೆ ಜಾತಿಯ ಆ ತಮ್ಮ ಇನ್ನೊಂದು ಹೊಂಡವನ್ನು ತೆಗೆಯತೊಡಗಿದನು.

ಹಾಗೆಯೇ ಬ್ರಾಹ್ಮಣ ಅಣ್ಣ ದುರ್ಗೆಯನ್ನು ಪೂಜಿಸುತ್ತಾನೆಂದೂ, ಮತ್ತೊಮ್ಮೆ ಹನುಮಂತನನ್ನು ಪೂಜಿಸುತ್ತಾನೆಂದೂ, ಕುಮಾರಸ್ವಾಮಿಯನ್ನು ಪೂಜಿಸುತ್ತಾನೆಂದೂ ಸಮಾಚಾರ ಬಂದುವು.

ಕಟ್ಟಕಡೆಗೆ ಬ್ರಾಹ್ಮಣ ಅಣ್ಣ ಹೊರಗೆ ಬಂದು ಹೊಯಿಗೆಯಲ್ಲಿರುವ ಹೊಂಡಗಳನ್ನು ನೋಡಿ, "ಇವೆಲ್ಲ ಏನು ?" ಎಂದು ತಮ್ಮನನ್ನು ಕೇಳಿದನು.

"ನೀರಿಗಾಗಿ ತೋಡಿದೆ" ಎಂದ ತಮ್ಮ.

"ಮೂಢನೇ! ಒಂದು ಹೊಂಡ ತೋಡಿದ್ದರೆ ಯಾವಾಗಲೋ ನೀರು ಬರುತ್ತಿತ್ತಲ್ಲ ?" ಎಂದ ಅಣ್ಣ.

"ಮೂಢನೇ! ನೀನು ಅಷ್ಟು ಮಂದಿ ದೇವರನ್ನು ಪೂಜಿಸದೆ, ಯಾವನೋ ಒಬ್ಬ ದೇವನನ್ನೇ ಪೂಜಿಸಿದ್ದರೆ ಯಾವಾಗಲೋ ಸಾರ್ಥಕನಾಗುತ್ತಿದ್ದೆಯಲ್ಲವೆ ?" ಎಂದ ತಮ್ಮ.





# ತೃಪ್ತಿಯ ಕವಚ

ಒಳ್ಳೆಯ ಒಂದು ಮಂಚ ಕೊಂಡುಕೊಳ್ಳಬೇಕೆಂದು ಗುರುವಯ್ಯನನ್ನು ಅವನ ಹೆಂಡತಿ ಬಹಳ ಕಾಲದಿಂದ ಪೀಡಿಸಿಕೊಂಡಿದ್ದಳು. ಯಾವ ನೆಲದಲ್ಲಿ ಮಲಗಿದರೂ ಸುಖನಿದ್ರೆ ಬರುವ ಗುರುವಯ್ಯನಿಗೆ ಮಂಚವಿದ್ದರೆ ಒಳ್ಳೆಯದೆನಿಸಿದರೂ, ಬೆಲೆ ಬಹಳವಾದೀತಲ್ಲಾ ಎಂದು ದಿನ ದೂಡಿಕೊಂಡೇ ಬಂದಿದ್ದನು.

ಹೀಗಿರುವಾಗ ಜಮೀನ್ದಾರರು ತೀರಿಹೋದುದರಿಂದ ಅವರ ಮಂಚವನ್ನು ಏಲಂ ಹಾಕುತ್ತಾರೆಂದು ಗೊತ್ತಾಯಿತು. ಜಮೀನ್ದಾರರ ಮಗನು ಹಳ್ಳಿಯನ್ನು ಬಿಟ್ಟು ನಗರಕ್ಕೆ ಹೋಗಿ ವಾಸಮಾಡುವ ಏರ್ಪಾಡು ಮಾಡಿದುದರಿಂದ, ಹಳೇಕಾಲದ ಭಾರವಾದ ವಸ್ತುಗಳನ್ನು ಏಲಂ ಮೂಲಕ ಮಾರಾಟ ಮಾಡುತ್ತಿದ್ದಾನಂತೆ.

ಗುರುವಯ್ಯನು ಜಮೀನ್ದಾರರ ಮಂಚವನ್ನು ಏಲಂನಲ್ಲಿ ಅಗ್ಗಕ್ಕೆ ಕೊಂಡುಕೊಂಡು ಮನೆಗೆ ತಂದನು. ಹೆಂಡತಿಗೂ ಸಂತೋಷವಾಯಿತು. ಮೂರು ತಿಂಗಳು ಕಳೆಯಿತು. ಮಂಚವು ಚೆನ್ನಾಗಿದ್ದರೂ ಅದಕ್ಕೆ ಹೊಂದಿಸಿದ್ದ ಕನ್ನಡಿ ಹಳೆಯದಾಗಿ, ಮೆರುಗು ಹೋಗಿ ಒಂದು ಚೂರು ಒಡಕೂ ಕಾಣುತ್ತಿತ್ತು. ಅದನ್ನು ತೆಗೆದು ಹೊಸ ಕನ್ನಡಿ ಹಾಕಿಸಬೇಕೆಂದು ತೋರಿದುದರಿಂದ ಗುರುವಯ್ಯನು ಹಳೆಯ ಕನ್ನಡಿಯನ್ನು ಎಬ್ಬಿಸಿ ತೆಗೆದನು. ಆಗ ಅದರ ಹಿಂದಿದ್ದ ಒಂದು ರಹಸ್ಯ ಅರೆಯೊಳಗೆ ಚಿನ್ನದ ನಾಣ್ಯಗಳಿರುವುದನ್ನು ನೋಡಿದನು.

"ನಿಜಕ್ಕೂ ಈ ನಾಣ್ಯಗಳು ನಗರದಲ್ಲಿರುವ ಜಮೀನ್ದಾರರ ಮಗನಿಗೇ ಸೇರಬೇಕು. ಪರರ ಸೊತ್ತು ಹಾವಿಗೆ ಸಮಾನವಾದುದರಿಂದ, ಈ ನಾಣ್ಯಗಳನ್ನು ನಗರಕ್ಕೆ ಒಯ್ದು ಜಮೀನ್ದಾರರ ಮಗನಿಗೇ ಕೊಟ್ಟು ಬಂದು ಬಿಡಿ" ಎಂದು ಗುರುವಯ್ಯನ ಹೆಂಡತಿ ಹೇಳಿದಳು.

ಗುರುವಯ್ಯನು ಆ ಚಿನ್ನದ ನಾಣ್ಯಗಳನ್ನು ತೆಗೆದುಕೊಂಡು ಮನೆಯಿಂದ ಹೊರಟು ನಗರಕ್ಕೆ ಮುಟ್ಟಿದಾಗ ಹೊತ್ತು ಅಸ್ತಮಿಸವಾಗಿ ಹೋಯಿತು. ಆ ರಾತ್ರಿ ಯಾರ ಮನೆಯಲ್ಲಾದರೂ ಮಲಗಿ, ಮರುದಿನ ಬೆಳಗಾದ ಮೇಲೆ ಜಮೀನ್ದಾರರ ಮಗನನ್ನು ಹುಡುಕಿಕೊಳ್ಳಬೇಕು ಎಂದು ಭಾವಿಸಿದನು.

ಆ ರಾತ್ರಿ ಗುರುವಯ್ಯನಿಗೆ ಆಶ್ರಯ ಕೊಟ್ಟವನು ಶೇಷಾದ್ರಿ ಎಂಬೊಬ್ಬ ಗೃಹಸ್ಥ. ಶೇಷಾದ್ರಿಯು

ಎಂ. ಕೆ. ಈಶ್ವರರಾವ್

ಕುಟುಂಬವು ಒಂದು ಕಾಲದಲ್ಲಿ ಚೆನ್ನಾಗಿದ್ದು, ಇತ್ತೀಚೆಗೆ ಬಡತನಕ್ಕೆ ಇಳಿದು ಹೋಗಿತ್ತಂತೆ.

ಶೇಷಾದ್ರಿಯ ಪತನವು ಮನಸ್ಸು ಕರಗುವ ಹಾಗೇ ಇದ್ದಿತು. ಎಲ್ಲವೂ ಒಂದರ ಹಿಂದೊಂದಾಗಿ ದೈವಿಕವಾಗಿ ಬಂದ ಕಷ್ಟಗಳು. ಅವನ ಒಬ್ಬ ಮಗನು ಇಪ್ಪತ್ತು ವಯಸ್ಸಿನವನಾಗಿ ಪ್ರಾಯಕ್ಕೆ ಬಂದಿದ್ದಾಗ, ರೋಗ ಬಂದು ಹಾಸಿಗೆ ಹಿಡಿದು ತೀರಿಹೋಗಿದ್ದನು. ಅವನ ಔಷಧ ಚಿಕಿತ್ಸೆಗಳಿಗಾಗಿ ಶೇಷಾದ್ರಿ ತುಂಬ ಹಣವನ್ನು ವ್ಯಯ ಮಾಡಿದರೂ ಪ್ರಯೋಜನ ವಾಗಲಿಲ್ಲ. ಅದು ನಡೆದ ಕೆಲವೇ ದಿನಗಳಲ್ಲಿ ಜವುಳೀ ಅಂಗಡಿ ಸುಟ್ಟು ಭಾರೀ ನಷ್ಟವಾಯಿತು. ಸಾಲ ವನ್ನು ತೀರಿಸಲು ಮನೆಯ ಸಾಮಾನುಗಳನ್ನೂ, ಕಡೆಗೆ ಮನೆಯನ್ನೂ ಸಹ ಮಾರಿಬಿಟ್ಟಿದ್ದನು.

"ನಾಳೆ ನಾವು ಈ ಮನೆಯನ್ನು ಖಾಲೀ ಮಾಡ ಬೇಕು. ಈಗ ನಾನೂ ನನ್ನ ಹೆಂಡತಿಯೂ ನಮ್ಮ ಚಿಕ್ಕ ಮಗನ ಮೇಲೆಯೇ ಆಶೆಯಿಟ್ಟು ಬದುಕಿ ಕೊಂಡಿದ್ದೇವೆ. ಅವನ ಹಣೆಯಲ್ಲಿ ಬ್ರಹ್ಮನು ಏನು ಬರೆದಿದ್ದಾನೋ?" ಎಂದನು ಶೇಷಾದ್ರಿ.

ಗುರುವಯ್ಯನು ಶೇಷಾದ್ರಿಯ ಪರಿಸ್ಥಿತಿಯನ್ನು ಕುರಿತು ಆಲೋಚಿಸುತ್ತಿದ್ದಂತೆ ರಾತ್ರಿ ಸರಿಯಾಗಿ ನಿದ್ದೆಯೇ ಬರಲಿಲ್ಲ. ಕಟ್ಟಕಡೆಗೆ ಅವನು ಜಮೀ ನ್ದಾರರ ಮಂಚದಲ್ಲಿ ಸಿಕ್ಕಿದ ಚಿನ್ನದ ನಾಣ್ಯಗಳನ್ನು ಶೇಷಾದ್ರಿಗೆ ಕೊಟ್ಟು, ಆಮೇಲೆ ಜಮೀನ್ದಾರರ ಮಗನನ್ನು ನೋಡಿ ಈ ಸಮಾಚಾರವನ್ನು ಹೇಳಿದ ರಾಯಿತೆಂದು ನಿಶ್ಚಯಿಸಿಕೊಂಡ ಮೇಲೆ ಅವನಿಗೆ ನಿದ್ದೆ ಬಂತು. ಆದರೆ ಸ್ವಲ್ಪ ಹೊತ್ತಿನಲ್ಲೇ ಅವನಿಗೆ ಫಕ್ಕನೆ ಎಚ್ಚರವಾಯಿತು.

ಒಬ್ಬ ಮುಸುಗಿನ ಮನುಷ್ಯನು ಶೇಷಾದ್ರಿಯ ಮಗನ ಕುತ್ತಿಗೆಯ ಮೇಲೆ ಕತ್ತಿಯನ್ನು ಇಟ್ಟು, "ನಿಮ್ಮಲ್ಲಿದ್ದ ಹಣವನ್ನೆಲ್ಲಾ ಎಲ್ಲಿಟ್ಟಿದ್ದೀರೆಂದು ಹೇಳಿ ಬಿಡು. ಇಲ್ಲದಿದ್ದರೆ ಇವನ ಕುತ್ತಿಗೆ ಕಡಿಯುತ್ತೇನೆ"



ಎಂದು ಶೇಷಾದ್ರಿಯನ್ನು ಬೆದರಿಸುವುದನ್ನು ಗುರು ವಯ್ಯನು ನೋಡಿದನು.

"ಹುಡುಗನ ಕೊಲ್ಲಬೇಡ! ನಿಜಕ್ಕೂ ನನ ಹತ್ತಿರ ಚಿಕ್ಕಾಸು ಕೂಡಾ ಇಲ್ಲ. ದೇವರಾಣೆಗೂ ಇಲ್ಲ" ಎಂದು ಶೇಷಾದ್ರಿ ಅಳುತ್ತಿದ್ದನು.

ಆಗ ಗುರುವಯ್ಯ ಮುಸುಗಿನವನನ್ನು ಕುರಿತು "ನನ್ನ ಹತ್ತಿರ ಚೀಲದಲ್ಲಿ ಧನವಿದೆ. ಆ ಹುಡುಗ ನನ್ನು ಬಿಟ್ಟು ಈ ಚೀಲವನ್ನು ತೆಗೆದುಕೊಂಡು ಹೋಗು" ಎಂದನು. ಮುಸುಗುಮನುಷ್ಯನು ಗುರು ವಯ್ಯನು ಕೊಟ್ಟ ಬಟ್ಟೆಯ ಚೀಲದೊಳಗಿದ್ದ ಚಿನ್ನದ ನಾಣ್ಯಗಳನ್ನು ತೆಗೆದುಕೊಂಡು ತೃಪ್ತನಾಗಿ, ಕತ್ತಲೆ ಯಲ್ಲಿ ಕರಗಿ ಹೋಗಿಬಿಟ್ಟನು.

"ದೇವರಂತೆ ನಮ್ಮ ಮಗನನ್ನು ಕಾಪಾಡಿದಿರಿ. ನಮ್ಮ ಭವಿಷ್ಯತ್ತೇ ಈ ಮಗನ ಮೇಲಿದೆ. ನಿಮ್ಮ ಋಣವನ್ನು ನಾವು ಹೇಗೆ ತೀರಿಸುತ್ತೇವೋ ತಿಳಿ ಯದು" ಎಂದು ಶೇಷಾದ್ರಿಯೂ ಅವನ ಹೆಂಡ

ತಿಯೂ ಗುರುವಯ್ಯನನ್ನು ನೋಡಿ ಹೇಳಿದರು. "ಹಾಗೆ ಹೇಳಬೇಡಿ. ಬಹುಶಃ ನಾನೇ ನಿಮಗೆ ಕೊಡಬೇಕಾದ ಋಣವನ್ನು ಕೊಟ್ಟೆನೋ ಏನೋ. ಅದಕ್ಕಾಗಿ ನೀವೇನೂ ಚಿಂತಿಸಬೇಕಾಗಿಲ್ಲ ಬಿಡಿ" ಎಂದ ಗುರುವಯ್ಯ.

ಮರುದಿನ ಬೆಳಗಾದ ಮೇಲೆ ಗುರುವಯ್ಯನು ಜಮೀನ್ದಾರನ ಮಗನನ್ನು ಹುಡುಕುತ್ತಾ ಹೊರಟು ಬಹಳ ಅಲೆದಾಡಿ, ಅಂತೂ ಅವನನ್ನು ಕಂಡುಹಿಡಿದನು. ನಗರದಲ್ಲಿ ಯಾರಿಗೂ ಜಮೀನ್ದಾರನ ಮಗನನ್ನು ಕುರಿತು ತಿಳಿಯದು. ಗುರುವಯ್ಯ ಊಹಿಸಿಕೊಂಡಂತೆ ಅವನು ದೊಡ್ಡ ಬಂಗಲೆಯಲ್ಲಿರಲಿಲ್ಲ. ಯಾವುದೋ ಮೂಲೆಯಲ್ಲಿದ್ದ ಒಂದು ಹುಲ್ಲಿನ ಗುಡಿಸಲಿನಲ್ಲಿದ್ದನು.

ಗುರುವಯ್ಯನು ಅವನೊಂದಿಗೆ ನಡೆದ ಸಂಗತಿಯನ್ನೆಲ್ಲಾ ಹೇಳಿ, "ಹೀಗೆ ಈಗ ನಾನು ನಿಮಗೆ ಸಾಲ ಕೊಡಬೇಕಾಗಿ ಬಂದಿದೆ. ನಡೆದ ಸಂಗತಿಗೆ ನೀವು ನನ್ನನ್ನು ಕ್ಷಮಿಸಿ. ತಿಂಗಳು ತಿಂಗಳೂ ಕಂತಿನ ಮೇಲೆ ಸ್ವಲ್ಪ ಸ್ವಲ್ಪವಾಗಿ ಕೊಡುತ್ತೇನೆ. ಇದಕ್ಕೆ ನೀವು ಒಪ್ಪಬೇಕು." ಎಂದು ಕೇಳಿಕೊಂಡನು.

ಅದನ್ನೆಲ್ಲ ಕೇಳಿ ಜಮೀನ್ದಾರನ ಮಗನು, "ನಾನು ಗ್ರಾಮವನ್ನು ಬಿಟ್ಟು ನಗರಕ್ಕೆ ಬಂದದ್ದೇ ಬುದ್ಧಿಯಿಲ್ಲದ ಕೆಲಸವಾಯಿತು. ಇಲ್ಲಿ ಎಷ್ಟಾದರೂ ಹಣ ಸಂಪಾದಿಸಬಹುದೆಂದು ಆಲೋಚಿಸಿದ್ದೆ. ನಗರದಲ್ಲಿರುವವರೆಲ್ಲರೂ ಮೋಸಗಾರರೇ. ನನ್ನನ್ನು ಒಬ್ಬ ಮನುಷ್ಯ ವ್ಯಾಪಾರದಲ್ಲಿ ಇಳಿಸಿ, ಎಲ್ಲಾ ದಿವಾಳಿಯಾಗಿಸಿ ನನ್ನನ್ನು ಈ ಗುಡಿಸಲಿಗೆ ದೂಡಿ, ತಾನು ಮಾಳಿಗೆ ಮನೆ ಕಟ್ಟಿಸಿಕೊಂಡ, ಬದುಕುವ ದಾರಿಯಿಲ್ಲದೆ, ಗ್ರಾಮಕ್ಕೆ ಹೋಗಲು ನಾಚಿಕೆಯಾಗಿ ಕಳ್ಳತನಕ್ಕಿಳಿದೆನು. ನಿನ್ನೆ ರಾತ್ರಿ ನಾನು ಕದ್ದದ್ದು ನನ್ನ ಹಣವನ್ನೇ ಎಂದಾಯಿತು. ನಿನ್ನಂತಹ ಉತ್ತಮರು ಹಳ್ಳಿಯಲ್ಲಿ ಹೊರತು ಪಟ್ಟಣದಲ್ಲಿರಲಾರರು. ನಾನು ನಮ್ಮ ಹಳ್ಳಿಗೇ ತಿರುಗಿ ಬರುತ್ತೇನೆ" ಎಂದನು ಪಶ್ಚಾತ್ತಾಪದಿಂದ.

ಗುರುವಯ್ಯನು ನಗುತ್ತ, "ಒಳ್ಳೆಯವರೂ ಕೆಟ್ಟವರೂ ಪ್ರತಿ ಜಾಗದಲ್ಲೂ ಇರುತ್ತಾರೆ. ನಗರದಲ್ಲಿ ಶೇಷಾದ್ರಿಯಂತಹ ಸಜ್ಜನರೂ ಇಲ್ಲವೆ? ಮನುಷ್ಯನಿಗೆ ತೃಪ್ತಿಯೇ ಕವಚವಾಗಿದೆ. ಅದಿದ್ದರೆ ಮನುಷ್ಯನು ಎಲ್ಲಿದ್ದರೂ ಸುಖವಾಗಿರುತ್ತಾನೆ. ಅದಿಲ್ಲದಿದ್ದರೆ ಕಷ್ಟಗಳಿಗೆ ಗುರಿಯಾಗುತ್ತಾನೆ. ನಿಮಗೆ ಆದುದೂ ಹೀಗೆಯೇ. ಶೇಷಾದ್ರಿ ತಾತ್ಕಾಲಿಕವಾಗಿ ಕಷ್ಟಪಟ್ಟರೂ ಅವನಿಗೆ ಒಳ್ಳೆಯ ದಿನಗಳು ಖಂಡಿತ ಬರುತ್ತವೆ" ಎಂದನು. ಆ ದಿನ ಸಾಯಂಕಾಲ ಗುರುವಯ್ಯನೊಂದಿಗೇ ಜಮೀನ್ದಾರನ ಮಗನೂ ತನ್ನ ಊರಿಗೆ ಹಿಂದಿರುಗಿದನು.





# ಪವಿತ್ರ ಜಲ

ಹಿಂದೆ ಮೋತೀಪುರವೆಂಬ ಗ್ರಾಮದಲ್ಲಿ ನೀರಿಗೆ ಬಹಳ ಕಷ್ಟವಾಗಿತ್ತು. ಗ್ರಾಮದಲ್ಲಿ ಒಂದೇ ಒಂದು ಕೆರೆಯೇನೋ ಇದ್ದಿತು. ಅದು ಯಾವ ಕಾಲದ ಕೆರೆಯೋ ಏನೋ. ಅಲ್ಲಲ್ಲಿ ಜರಿದು ಹುಗಿದು ಹೋಗಿತ್ತು, ಇದ್ದ ನೀರಿಗೆ ಎಂತಹುದೋ ಹುಳುಕು ವಾಸನೆ. ಆ ಗ್ರಾಮವನ್ನು ಪಾಲಿಸುವ ಜವಾಬ್ದಾರಿ ಹೊತ್ತ ಜಮೀನ್ದಾರನು ಐದಾರು ಗ್ರಾಮಗಳಾಚೆಗೆ ಸುಖವಾಗಿದ್ದನು, ಮೋತೀಪುರವನ್ನು ಕುರಿತು ಅವನು ಸ್ವಲ್ಪವೂ ಹಚ್ಚಿಕೊಳ್ಳುತ್ತಿರಲಿಲ್ಲ. ಅವನಿಗಿರುವ ಆಸಕ್ತಿಯೆಂದರೆ ಕಾಲ ತಪ್ಪದಂತೆ ರೈತರಿಂದ ಗೇಣಿ ಕಾಣಿಕೆಗಳನ್ನು ವಸೂಲು ಮಾಡಿಕೊಳ್ಳುವದರಲ್ಲಿ ಅಷ್ಟೇ.

ಈ ಪರಿಸ್ಥಿತಿಯಲ್ಲಿ ಊರೊಳಗಿನ ಹಿರಿಯರು ಒಂದು ಗೂಡಿ ತಮ್ಮ ನೀರಿನ ಸಮಸ್ಯೆಯನ್ನು ಕುರಿತು ಚರ್ಚಿಸಿಕೊಂಡರು. ಆ ಗ್ರಾಮವು ಈಗಿನಷ್ಟು ಬೆಳೆಯುವುದಕ್ಕೆ ಮೊದಲು ಊರಿನ ಬದಿಯಲ್ಲಿ ಒಂದು ಸ್ಮಶಾನವಿದ್ದಿತು. ಗ್ರಾಮವು ಬೆಳೆಯುತ್ತಾ ಬಂದಂತೆ ಊರಿನವರು ಸ್ಮಶಾನವನ್ನು ದೂರಕ್ಕೆ ಜರುಗಿಸಿ ಹಳೆಯ ಸ್ಮಶಾನವನ್ನು ಊರಿನ ನಡುವೆ ಬೀಳು ನೆಲವಾಗಿ ಬಿಟ್ಟುಬಿಟ್ಟರು. ಇದು ಬಹಳ ಕಾಲದ ಕೆಳಗಿನ ಮಾತು. ಈಗ ಆ ಸ್ಥಳದಲ್ಲಿ ಅಗೆದರೆ ಒಳ್ಳೆಯ ನೀರಿನ ಕೆರೆಯೊಂದು ಉಂಟಾಗುತ್ತದೆ. ಈ ಮಾತಿಗೆ ಕೆಲವರು, "ಸ್ಮಶಾನವೆಂದರೆ ಪ್ರೇತ ಭೂಮಿಯಲ್ಲವೇ ? ಅಲ್ಲಿ ಕೆರೆತೋಡುವುದೆಂದರೇನಪ್ಪಾ" ಎಂದು ಆಕ್ಷೇಪವೆತ್ತಿದರೂ, ಕಡೆಗೆ ಅಲ್ಲಿ ಕೆರೆತೋಡುವ ನಿರ್ಧಾರಕ್ಕೇ ಬಂದರು.

ವ್ಯವಸಾಯದ ಹಣ ಕೈಗೆ ಬರುವ ಕಾಲದಲ್ಲಿ ಎಲ್ಲರಿಂದರೂ ಚಂದಾ ಸೇರಿಸಿ ಹಳೆಯ ಸ್ಮಶಾನದ ಜಾಗದಲ್ಲಿ ಕೆರೆತೋಡುವ ಕೆಲಸವನ್ನು ಪ್ರಾರಂಭ ಮಾಡಿದರು. ಆದರೆ ಹಣ ಸಾಲದೆ ಮಧ್ಯದಲ್ಲಿ ಆ ಕೆಲಸ ನಿಂತುಹೋಯಿತು.

ಈ ಸಂದರ್ಭದಲ್ಲಿ ಹಳೆಯ ಜಮೀನ್ದಾರನು ತೀರಿ ಹೋಗಿ, ಅವನ ಮಗನು ಅಧಿಕಾರಕ್ಕೆ ಬಂದನು. ಇವನ ಗುಣವು ತಂದೆಗಿಂತ ಉದಾರವಾಗಿತ್ತು. ಮೋತೀಪುರದ ಜನರು ಬಂದು ತಮ್ಮ ನೀರಿನ ಕಷ್ಟವನ್ನು ಹೇಳಿಕೊಂಡಾಗ, ಹೊಸ ಜಮೀನ್ದಾರನು ಅವರಿಗೆ ಬೇಕಾದ ಹಣವನ್ನು ಸಹಾಯ ಮಾಡಿದನು. ಆದುದರಿಂದ ಗ್ರಾಮಸ್ಥರು ಈ ಜಮೀನ್ದಾರನನ್ನು

ಪಿ. ಸಿ. ಸರ್ಕಾರ್, ಐಂದ್ರಜಾಲಿಕರು

ಹೊಗಳುತ್ತ, ಹೊಸ ಕೆರೆಗೆ ಹರಿಸಾಗರವೆಂದು ಅವನ ಹೆಸರನ್ನೇ ಇಡುವುದಾಗಿ ಹೇಳಿದರು. ತನ್ನ ತಂದೆಯ ಹೆಸರಿನಿಂದ ಕೆರೆಗೆ ರಾಮಸಾಗರವೆಂದು ಹೆಸರಿಡಲು ಹೇಳಿದನು ಹೊಸ ಜಮೀನ್ದಾರ.

ಊರ ಜನರು ಅವನ ಪಿತೃ ಭಕ್ತಿಯನ್ನು ಮೆಚ್ಚುತ್ತ, ಮಳೆಗಾಲ ಪ್ರಾರಂಭವಾಗುವುದರೊಳಗೆ ಕೆರೆಯ ಕೆಲಸ ಮುಗಿಸಬೇಕೆಂಬ ಹುರುಪಿನಿಂದ ಕೆಲಸ ಪ್ರಾರಂಭಿಸಿದರು. ಕೆರೆಯ ಅಗೆತ ಮುಗಿದ ಮೇಲೆ, ಅದರ ಬುಡದ ನಾಲ್ಕು ಮೂಲೆಗಳಲ್ಲಿ ನಾಲ್ಕು ಬಾವಿಗಳನ್ನು ತೋಡಲು ಉಪಕ್ರಮಿಸಿದರು. ಮೂರು ಬಾವಿಗಳನ್ನು ಅಗೆದು ನಾಲ್ಕನೇ ಬಾವಿಯನ್ನು ಅಗೆಯುವಾಗ ಮೇಲಿನ ಭಾಗವು ಒಡೆದು ಬಿದ್ದು ಅಡಿಯಲ್ಲಿ ಕೆಲಸ ಮಾಡುತ್ತಿದ್ದ ಇಬ್ಬರು ಕೂಲಿಯವರು ಮಣ್ಣಿನಡಿಯಲ್ಲಿ ಸತ್ತುಹೋದರು.

ಊರವರಿಗೆಲ್ಲ ಇದು ದೊಡ್ಡ ಅಪಶಕುನವಾಗಿ ತೋರಿತು. "ಸ್ಮಶಾನದಲ್ಲಿ ಕೆರೆತೋಡಿದರೆ ಹೀಗಾಗದೆ ಮತ್ತೇನಾದೀತು? ಇದು ಪ್ರೇತಭೂಮಿ ಎಂಬುದು ಪ್ರತ್ಯಕ್ಷವಾಗಿ ರುಜುವಾಯಿತಲ್ಲ! ಇಷ್ಟು ಮಾಡಿದ್ದೆಲ್ಲ ವ್ಯರ್ಥವೇ!" ಎಂದರು ಕೆಲವರು.

ಒಟ್ಟಿನ ಮೇಲೆ ಊರವರಿಗಾದ ಚಿಂತೆಗೆ ಮೇರೆ ಇರಲಿಲ್ಲ. ಆಮೇಲೆ ಮಳೆ ಬಂದು, ರಾಮಸಾಗರವು ನೀರಿನಿಂದ ತುಂಬಿ, ತಾವರೆ ನೈದಿಲೆ ಮೊದಲಾದ ಹೂಗಳು ಅರಳಿ ಕಳೆಗೊಂಡು ಬೆಳಗುತ್ತಿದ್ದಿತು. ಆದರೆ ಜನರು ಅದರ ಕಡೆಗೆ ಹಣಿಕಲಿಲ್ಲ.

ಹೀಗೆ ಎರಡು ವರ್ಷ ಕಳೆಯಿತು. ಕೆರೆಯ ತುಂಬಾ, ತೀರದಲ್ಲಿಯೂ ಏನೇನೋ ಹುಲ್ಲು ಗಿಡಗಳು ಬೆಳೆದು, ಚಿತ್ರವಿಚಿತ್ರವಾದ ಹೂಗಳೂ ಹುಳುಗಳೂ, ಹಾವು ಹರಣೆಗಳೂ ತುಂಬಿದುವು.

ಜಮೀನ್ದಾರನಾದ ಹರಿಶಂಕರನಿಗೆ ತಾರಾನಾಥನೆಂಬ ಐಂದ್ರಜಾಲಿಕನೊಬ್ಬನು ಮಿತ್ರನಾಗಿದ್ದನು. ಒಂದು ಸಾರಿ ಹರಿಶಂಕರನು ತಾರಾನಾಥನೊಡನೆ ಮೋತೀಪುರದ ರಾಮಸಾಗರವನ್ನು ಕುರಿತು ನಡೆದ ಸಂಗತಿಗಳನ್ನು ವಿವರಿಸಿ ಹೇಳಿದನು. ಅದನ್ನೆಲ್ಲ ಕೇಳಿ ತಾರಾನಾಥನು, "ಹೀಗೇನು



ಕಥೆ? ಚಿಂತಿಸಬೇಡ ಬಿಡು. ಗ್ರಾಮದ ಜನರು ಮೂಢ ಭಾವನೆಗಳಲ್ಲಿ ವಿಶ್ವಾಸವಿಟ್ಟ ಹಾಗೆಯೇ ಅದ್ಭುತಗಳನ್ನು ಸಹಾ ನಂಬುತ್ತಾರೆ. ಆ ಕೆರೆಗೆ ಮೆಟ್ಟಿಲು ಮುಂತಾದ್ದೆಲ್ಲಾ ಕಟ್ಟಿಸಿ ಆಗಿದೆಯೇನು?" ಎಂದು ಕೇಳಿದನು.

"ಮೆಟ್ಟಿಲು ಚೌಕಟ್ಟು ಮಾತ್ರವಲ್ಲ, ಒಂದು ಶಿವಾಲಯವನ್ನೂ ಕಟ್ಟಿಸಿದ್ದೇನೆ. ಪ್ರತಿಷ್ಠೆಮಾತ್ರ ಆಗಲಿಲ್ಲ ಅಷ್ಟೇ" ಎಂದ ಜಮೀನ್ದಾರ.

"ಹಾಗಾದರೆ ಮತ್ತೇನು? ಅಡಿಗೇ ಆಗಿದೆ, ಊಟ ಮಾಡಬೇಕಾದ್ದೇ ಬಾಕಿ ಅನ್ನು. ಆ ಕೆರೆಯ ತೀರದಲ್ಲಿ ಬೆಳೆದ ಹುಚ್ಚು ಗಿಡಗಳನ್ನೆಲ್ಲಾ ತೆಗೆಸಿ ಶುಭ್ರಮಾಡಿಸು. ಕಾಮರೂಪದಿಂದ ತಾರಾನಾಥನೆಂಬ ಯೋಗೀಂದ್ರನು ಬಂದು, ಇಂತಹ ದಿನ ಆಲಯದಲ್ಲಿ ಪ್ರತಿಷ್ಠೆ ನಡೆಸುವನೆಂದು ಪ್ರಚಾರಪಡಿಸು. ಆ ಯೋಗೀಂದ್ರನು ಕೆರೆಯ ಪ್ರದೇಶದಲ್ಲಿರುವ ಭೂತಪಿಶಾಚಿಗಳನ್ನು ಓಡಿಸಿ, ಬರುವ ಹುಣ್ಣಿಮೆಯ ದಿನ ಕೆರೆಯ ನೀರನ್ನು ಅಮೃತಪ್ರಾಯವಾಗಿ ಮಾಡುವನೆಂದು ಜನರಿಗೆ ಹೇಳಿಸು. ಎಲ್ಲಾ ಸರಿಯಾಗಿ ಬಿಡುತ್ತೆ. ಚಿಂತೆ ಬಿಡು!" ಎಂದನು ತಾರಾನಾಥ.

ಆದರಂತೆ ಎಲ್ಲಾ ಕೆಲಸಗಳೂ ಭರದಿಂದ ನಡೆಯತೊಡಗಿದುವು. ಶಿವಾಲಯದ ಪ್ರತಿಷ್ಠೋತ್ಸವಕ್ಕೆ ಎಲ್ಲಾ ಏರ್ಪಾಡುಗಳೂ ಮುಗಿದುವು. ನಿರ್ದೇಶಿಸಲ್ಪಟ್ಟ ದಿನ ಐಂದ್ರಜಾಲಿಕ ತಾರಾನಾಥನು ತಾಂತ್ರಿಕ ಯೋಗಿಯ ವೇಷ ಧರಿಸಿಕೊಂಡು ಮೋಶೀಪುರಕ್ಕೆ ಬಂದು, ಕಾರ್ಯಭಾರವನ್ನು ತನ್ನ ಕೈಗೆ ತೆಗೆದುಕೊಂಡನು. ಅವನಿಗೆ ಬೇಕಾದ ಸೌಕರ್ಯಗಳನ್ನು ಜಮೀನ್ದಾರನ ನೌಕರರು ನೋಡಿಕೊಳ್ಳುತ್ತಿದ್ದರು.

ಮರುದಿನವೇ ಹುಣ್ಣಿಮೆ. ಜಮೀನ್ದಾರರ ಕುಲಪುರೋಹಿತರು ದೇವಾಲಯದೊಳಗೆ ಪ್ರತಿಷ್ಠಾಪನೆಯ ಕಾರ್ಯಗಳನ್ನು ಶಾಸ್ತ್ರೋಕ್ತವಾಗಿ ನರವೇರಿಸಿದರು. ಈ ಉತ್ಸವವನ್ನು ನೋಡಲು ನಾಲ್ಕಾರು ಊರುಗಳ ಜನರು ಅಧಿಕ ಸಂಖ್ಯೆಯಲ್ಲಿ ಬಂದು ಕೂಡಿದರು. ಬಗೆ ಬಗೆಯ ಸಂಗೀತಗಳೂ, ಹರಿಕಥೆ





ಗಳೂ, ವಾದ್ಯಗೋಷ್ಠಿಗಳೂ ಆಕರ್ಷಕವಾಗಿದ್ದುವು. ಈಗ ಕೆರೆಯ ನೀರೂ ಪರಿಶುದ್ಧವಾಗಿ ಆಕರ್ಷಣೀಯವಾಗಿ ಕಂಗೊಳಿಸುತ್ತಿದ್ದಿತು. ಆದರೆ ಜನರಿಗೆ ಅದನ್ನು ನೋಡಿದರೆ ಭಯವಿದ್ದೇ ಇದ್ದಿತು. ಯಾರೂ ಆ ಕೆರೆಯ ನೀರನ್ನು ಮುಟ್ಟುವ ಸಾಹಸಕ್ಕೆ ಹೋಗಲಿಲ್ಲ. ಎಲ್ಲರೂ ಯೋಗಿ ಮಾಡುವ ಜಲಶುದ್ಧಿ ಕಾರ್ಯಕ್ರಮವನ್ನೇ ನಿರೀಕ್ಷಿಸಿಕೊಂಡಿದ್ದರು. ಆಲಯದಲ್ಲಿ ಪ್ರತಿಷ್ಠೆಯಾದ ಮೇಲೆ ಜಲಶುದ್ಧಿ ಕಾರ್ಯಕ್ರಮವಿತ್ತು.

ಕೆಂಪು ಬಟ್ಟೆಗಳನ್ನು ಧರಿಸಿ ಮಾರುದ್ದ ಗಡ್ಡದಿಂದೊಪ್ಪುವ ತಾರಾನಾಥನು ಕೆರೆಯ ತೀರಕ್ಕೆ ಬಂದನು. ಆವನು ಅಲ್ಲಿ ಕೂಡಿದ ಜನರನ್ನು ನೋಡಿ, "ಮಿತ್ರರೇ, ನೀವೆಲ್ಲರೂ ಅಂದುಕೊಂಡಿರುವ ಸಂಗತಿ ನಿಜ. ಇದು ಪ್ರೇತಗಳು ವಾಸವಾಗಿದ್ದ ಸ್ಥಳವೇ ನಿಜ. ನಾನು ಯೋಗದೃಷ್ಟಿಯಿಂದ ಈ ಸಂಗತಿಯನ್ನು ತಿಳಿದಿದ್ದೇನೆ. ಮೊದಲೇ ಇಲ್ಲಿ ಶಿವಾಲಯ ಕಟ್ಟಿಸಿ ಪ್ರತಿಷ್ಠೆ ಮುಗಿಸಿ ಕೆರೆ ತೋಡಬೇಕಾಗಿತ್ತು. ಏಕೆಂದರೆ ಸ್ಮಶಾನದ ಭೂತಗಳು ಭೂತನಾಥನಾದ ಶಿವನ ಅಂಕೆಯಲ್ಲಿರುವಂಥವು. ಈಗ ಶಿವಾಜ್ಞೆಯಿಂದ ಅವೆಲ್ಲಾ ದೂರ ಹೋಗಿವೆ. ಇಷ್ಟುಕಾಲ ಪ್ರೇತಗಳ ಕಾರಣದಿಂದ ಅಪವಿತ್ರವಾಗಿದ್ದ ಇದರ ನೀರನ್ನು ಇನ್ನು ಪವಿತ್ರಗೊಳಿಸಬೇಕಾದುದಷ್ಟೇ ಉಳಿದಿದೆ. ಕ್ಷಣಮಾತ್ರದೊಳಗೆ ನಾನು ಈ ನೀರನ್ನು ಅಮೃತವನ್ನಾಗಿ ಮಾಡುತ್ತೇನೆ. ಆಮೇಲೆ ಶಿವನ ರಕ್ಷಣೆಯಲ್ಲಿರುವ ಈ ನೀರನ್ನು ನೀವು ಹೇಗೆ ಬೇಕಾದರೂ ಉಪಯೋಗಿಸಬಹುದು. ಇಗೋ ನೋಡಿರಿ !" ಎಂದನು.

ಹೀಗೆ ಹೇಳಿ ತಾರಾನಾಥನು ದೇವಾಲಯದೊಳಗೆ ಹೋಗಿ, ಒಂದು ಗೆರಟೆಯ ಸೌಟನ್ನು ಹಿಡಿದುಕೊಂಡು ಹೊರಗೆ ಬಂದನು. ತೆಂಗಿನ ಕರಟದ ಆ ಸೌಟಿಗೆ ಲೋಹದ ಹಿಡಿಕೆಯನ್ನು ತೂರಿಸಲಾಗಿತ್ತು. ಅವನು ಕೆಲವಂದಿ ಗ್ರಾಮಸ್ಥರನ್ನು ತನ್ನೊಂದಿಗೆ ಕರೆದು, ನೀರಿನ ಬಳಿಗೆ ಇಳಿದು, ಆ ಸೌಟಿನಲ್ಲಿ ಸ್ವಲ್ಪ ನೀರು ತೆಗೆದು, ಎಲ್ಲರ ಕೈಗೂ ಸ್ವಲ್ಪ ಹಾಕಿ, "ಹೇಗಿದೆ, ವಾಸನೆ ನೋಡಿ ಹೇಳಿರಿ" ಎಂದನು. ಅವರು ತಮ್ಮ ಕೈಯ ನೀರನ್ನು ಮೂಸಿ ನೋಡಿ "ಯಾವ ವಾಸನೆಯೂ ಇಲ್ಲ" ಎಂದರು.

ಕೂಡಲೇ ತಾರಾನಾಥನು ಸಂಸ್ಕೃತದಲ್ಲಿ ಶಿವಸ್ತೋತ್ರವನ್ನು ಗಟ್ಟಿಯಾಗಿ ಪಠಿಸಿ, ಮತ್ತೆ ಸೌಟಿನಲ್ಲಿ ಕೆರೆಯ ನೀರು ತೆಗೆದು "ಶಿವಶಿವ" ಎಂದು ಹತ್ತುಸಾರಿ ಗುಣುಗುಣಿಸಿ, ಎಲ್ಲರ ಕೈಗೂ ಆ ನೀರನ್ನು ಸ್ವಲ್ಪಸ್ವಲ್ಪ ಹಾಕಿ, "ಈಸಾರಿ ವಾಸನೆ ನೋಡಿ, ಆಮೇಲೆ ತೀರ್ಥದಂತೆ ಕುಡಿದು ರುಚಿಯನ್ನೂ ನೋಡಿ ಹೇಳಿರಿ" ಎಂದನು.

ಜನರು ವಾಸನೆ ನೋಡಿ, ಕೂಡಲೇ ಕುಡಿದು ಕಣ್ಣಿಗೆ ಒತ್ತಿಕೊಂಡು, ಭಕ್ತಿಪರವಶರಾಗಿ "ಶಿವಶಿವ ! ದಿವ್ಯವಾಗಿದೆ ! ನಿಜಕ್ಕೂ ಅಮೃತವೇ !" ಎಂದರು.

"ಇನ್ನೇನೂ ಭಯವಿಲ್ಲ. ಎಂದೆಂದಿಗೂ ಇಲ್ಲಿ ಇನ್ನು ಪಿಶಾಚಿಗಳ ಕಾಟವೇ ಇಲ್ಲ" ಎಂದನು ತಾರಾನಾಥ. ಜನರು ಭಯವಿಲ್ಲದೆ ನೀರಿಗೆ ಹಾರಿ ಈಜಾಡಿ ಸ್ನಾನಮಾಡಿದರು. ರಾಮಸಾಗರವು ಗ್ರಾಮಸ್ಥರಿಗೆ ಪರಮಪವಿತ್ರವಾಗಿ ಹೋಯಿತು. ಗ್ರಾಮಕ್ಕಿದ್ದ ನೀರಿನ ಕಷ್ಟವೂ ಪರಿಹಾರವಾಯಿತು.

ತರುವಾಯ ಹರಿಶಂಕರ ಜಮೀನ್ದಾರನು ತಾರಾನಾಥನನ್ನು ಕುರಿತು, "ಮಿತ್ರಾ, ನೀನು ದೊಡ್ಡ ಅದ್ಭುತವನ್ನೇ ಮಾಡಿದೆ! ಅದು ಹೇಗಾಯಿತು? ಆಶ್ಚರ್ಯವಾಗಿದೆಯಲ್ಲಾ?" ಎಂದು ಕೇಳಿದನು.

ತಾರಾನಾಥನು ತನ್ನ ಪೆಟ್ಟಿಗೆಯಿಂದ ಒಂದು ಗೆರಟೆ ಸೌಟನ್ನು ತೆಗೆದು "ಇದರ ಹಿಡಿಕೆ ನೋಡಿದೆಯಾ? ಇದು ಒಳಗಡೆಯಲ್ಲಿ ಟೊಳ್ಳಾಗಿದೆ. ಚಿಪ್ಪಿನೊಳಗೆ ತೂರಿಸಲ್ಪಟ್ಟ ಒಂದು ಕೊನೆ ಭದ್ರವಾಗಿ ಮುಚ್ಚಿಕೊಂಡಿದೆ. ನನ್ನ ಕೈಯಲ್ಲಿರುವ ಇದರ ಎರಡನೇ ಕೊನೆಯಲ್ಲಿ ರಬ್ಬರಿನ ಬಿರಡೆ ಹಾಕಿ ಗಾಳಿ ಹೋಗದಂತೆ ಮುಚ್ಚಿ ಅದಕ್ಕೆ ಬಣ್ಣ ಹಚ್ಚಿ ಲೋಹದ ಹಾಗೇ ಕಾಣುವಂತೆ ಮಾಡಿದ್ದೇನೆ. ಗೆರಟೆಯ ಮಧ್ಯಲ್ಲಿರುವ ಹಿಡಿಕೆಯಲ್ಲಿ ತೂತಿದೆ. ಅದು ನೋಡುವವರಿಗೆ ಕಾಣುವುದಿಲ್ಲ. ಇಲ್ಲಿ ನಾನು ಕೈಹಿಡಿದ ಸ್ಥಳದಲ್ಲಿ ಇನ್ನೊಂದು ರಂಧ್ರವಿದೆ. ಅದು ಕೂಡಾ ನೋಡುವವರಿಗೆ ಕಾಣದು. ಅದನ್ನು ನನ್ನ ಹೆಬ್ಬೆರಳಿನಿಂದ ಮುಚ್ಚಿಕೊಂಡಿರುತ್ತೇನೆ. ಇಂದ್ರಜಾಲ ಮಾಡುವುದಕ್ಕೆ ಮೊದಲು ಈ ಹಿಡಿಕೆಯಲ್ಲಿದ್ದ ಬಿರಡೆಯನ್ನು ತೆಗೆದು, ಹಿಡಿಕೆಯಲ್ಲಿರುವ ಎರಡು ರಂಧ್ರಗಳನ್ನೂ ಬೆರಳುಗಳಿಂದ ಮುಚ್ಚಿಕೊಂಡು, ಹಿಡಿಕೆ ಕೊಳವೆಯೊಳಗೆ ಗಂಧ ಕಸ್ತೂರಿ, ಜೇನು ಬೆರೆಸಿದ ನೀರನ್ನು ತುಂಬಿಸಿದ್ದೇನೆ. ತರುವಾಯ ರಬ್ಬರು ಬಿರಡೆಯನ್ನು ಮುಚ್ಚಿದ್ದೇನೆ. ಆಮೇಲೆ ಮೇಲ್ಗಡೆಯ ರಂಧ್ರವನ್ನು ಮುಚ್ಚಿದ ಎಡಗೈ ಬೆರಳನ್ನು ತೆಗೆದು ಹಿಡಿಕೆಯನ್ನು ಹಿಡಿಯುವಲ್ಲಿರುವ ರಂಧ್ರವನ್ನು ಬಲಗೈ ಹೆಬ್ಬೆರಳಿನಿಂದ ಮುಚ್ಚಿದೆನು. ಹಾಗೆ ಸೌಟನ್ನು ಹಿಡಿದುಕೊಂಡು ಆಲಯದೊಳಗಿನಿಂದ ಹೊರಗೆ ಬಂದು ಅದ್ಭುತವನ್ನು ಮಾಡಿದೆ. ಮೊದಲನೇಸಾರಿ ಸೌಟನ್ನು ನೀರಿನಲ್ಲಿ ಮುಳುಗಿಸಿದಾಗ ನನ್ನ ಬಲಗೈಯ ಹೆಬ್ಬೆರಳು ರಂಧ್ರದ ಮೇಲೆಯೇ ಇತ್ತು. ಅದುದರಿಂದ ಆ ನೀರು ಸಾಧಾರಣ ನೀರಿನಂತೆ ಯಾವ ವಾಸನೆಯೂ ಇಲ್ಲದಿತ್ತು. ಆದರೆ ಎರಡನೇಸಾರಿ ಸೌಟನ್ನು ನೀರಿನಲ್ಲಿ ಮುಳುಗಿಸಿದಾಗ ರಂಧ್ರದ ಮೇಲಿದ್ದ ಬಲಗೈ ಹೆಬ್ಬೆರಳನ್ನು ತೆಗೆದುಬಿಟ್ಟೆ. ಅದುದರಿಂದ ಗೆರಟೆಯಲ್ಲಿರುವ ನೀರಿನಲ್ಲಿ ಹಿಡಿಕೆಯ ಕೊಳವಿಯ ಸುವಾಸನೆಯ ನೀರು ಪ್ರವಹಿಸಿತು. ಅದರಲ್ಲಿಯ ಜೇನಿನಿಂದ ರುಚಿಯೂ ಪರಿಮಳವೂ ಬಂದಿತು" ಎಂದನು.





# ಹೆಚ್ಚಿನ ವಿದ್ಯೆ ಯಾವುದು?

ಒಬ್ಬ ರಾಜನು, ತನ್ನ ರಾಜಧಾನಿಯಲ್ಲಿ ವರ್ಷಾ ವರ್ಷ ಪ್ರಜೆಗಳನ್ನೆಲ್ಲ ಬರಮಾಡಿಸಿಕೊಂಡು, ಎಲ್ಲಾ ಬಗೆಯ ವಿದ್ಯೆಗಳನ್ನೂ ಪ್ರದರ್ಶನಮಾಡಿಸುತ್ತಿದ್ದನು. ಯಾವ ವಿದ್ಯೆಯಲ್ಲಾದರೂ ಪ್ರತ್ಯೇಕ ಪ್ರಾವೀಣ್ಯತೆ ಪಡೆದವರಿಗೆ ಮಹಾರಾಜನು ತಕ್ಕ ಬಹುಮಾನ ವನ್ನೂ, ವಾರ್ಷಿಕಗಳನ್ನೂ ಕೊಡುತ್ತಿದ್ದನು. ಈ ಸಂಗತಿಯನ್ನು ಡಂಗುರದ ಮೂಲಕ ಎಲ್ಲರಿಗೂ ತಿಳಿಸುತ್ತಿದ್ದನು. ಅನೇಕ ಗ್ರಾಮಗಳಿಂದಲೂ ಅನೇಕ ಮಂದಿ ರಾಜಧಾನಿಗೆ ಹೋಗುತ್ತಿದ್ದರು.

ರಾಮಶಾಸ್ತ್ರಿ ಹರಿಕಥೆ ಮಾಡುವುದರಲ್ಲಿ ಬಹಳ ಗಟ್ಟಿಗ. ಅದರ ಜತೆಗೆ ಒಳ್ಳೆಯ ಪಂಡಿತನೂ ಆಗಿದ್ದನು. ಅವನು ತನ್ನ ವಿದ್ಯೆಯನ್ನು ಪ್ರದರ್ಶಿಸಲು ರಾಜಧಾನಿಗೆ ಹೊರಟನು, ಅವನೊಂದಿಗೆ ಬಿಲ್ಲು ವಿದ್ಯೆಯಲ್ಲಿ ನಿಪುಣನಾದ ಸುಧನ್ವನೆಂಬವನೂ ತನ್ನ ವಿದ್ಯೆಯನ್ನು ಪ್ರದರ್ಶಿಸಲು ಹೊರಟನು.

ಇವರಿಬ್ಬರೂ ಹೊರಡುವಾಗ ದೊಣ್ಣೆ ತಿರುಗಿಸು ವುದರಲ್ಲಿ ಜಾಣನಾಗಿದ್ದ ತಾಲೀಮು ವೀರಯ್ಯನ ನೆನಪು ಬಂದು, ಅವನನ್ನೂ ತಮ್ಮೊಂದಿಗೆ ಬರುವಂತೆ ಕರೆದರು. "ವೀರಯ್ಯಾ, ನಿನ್ನ ಕರಾಮತಿಯನ್ನು ನೋಡಿ ಮಹಾರಾಜರು ಬಹುಮಾನ ಕೊಟ್ಟರೂ ಕೊಟ್ಟಾರು. ಇಲ್ಲದಿದ್ದರೂ ಅಲ್ಲಿ ನಡೆಯುವ ಎಷ್ಟೋ ಬಗೆಯ ವಿದ್ಯಾ ಪ್ರದರ್ಶನಗಳನ್ನು ನೋಡಿ ಆನಂದಿಸ ಬಹುದಷ್ಟೇ ? ಪ್ರಯಾಣವು ಉತ್ಸಾಹದಿಂದ ಸಾಗಲು ಇಬ್ಬರಿಗಿಂತ ಮೂವರಿದ್ದರೆ ಇನ್ನೂ ಒಳ್ಳೆಯದು. ಹೊರಡು" ಎಂದರು. ಸರಿ ಎಂದು ವೀರಯ್ಯನೂ ತನ್ನ ದೊಣ್ಣೆಯೊಂದಿಗೆ ಹೊರಟನು.

ದಾರಿಯಲ್ಲಿ ಹೊತ್ತಿಗೊಬ್ಬರು ಅಡಿಗೆ ಮಾಡುವು ದೆಂದು ಮೊದಲೇ ಗೊತ್ತು ಮಾಡಿಕೊಂಡಿದ್ದರು. ಹಾಗೆ ಪ್ರಯಾಣ ಮಾಡುತ್ತ, ಒಂದು ದಿನ ಅವರು ಕಾಡು ದಾರಿಯಲ್ಲಿ ನಡೆಯುತ್ತಿದ್ದಾಗ, ಮಾತಿಗೆ ಮಾತಾಗಿ ಯಾವುದು ಹೆಚ್ಚಿನ ವಿದ್ಯೆ ಎಂಬ ವಿಷಯ ದಲ್ಲಿ ಚರ್ಚೆ ಹೊರಟಿತು.

"ಎಲ್ಲಾ ವಿದ್ಯೆಗಳಲ್ಲಿ ಬಿಲ್ಲು ವಿದ್ಯೆಯೇ ನಿಸ್ಸಂದೇಹ ವಾಗಿಯೂ ಹೆಚ್ಚಿನದು. ರಾಮಬಾಣಕ್ಕಿಂತ ಮಿಗಿ ಲಾದುದಿಲ್ಲವಷ್ಟೆ? ನೂರು ಗಜ ದೂರದಲ್ಲಿದ್ದ ಶತ್ರು ವನ್ನಾಗಲೀ, ಹಾರುವ ಪಕ್ಷಿಯನ್ನಾಗಲೀ, ಗುರಿ ಹಿಡಿದು ಹೊಡೆಯಲು ನನಿಂದ ಸಾಧ್ಯವಿದೆ. ನನ್ನನ್ನು ಒಂಟಿಯಾಗಿ ಅಡವಿಯಲ್ಲಿ ಬಿಟ್ಟರೂ ಬೇಟೆ

ಜಿ. ಸಾಂಬ

ಯಾಡಿಯೇ ಜೀವನ ನಡೆಸಬಲ್ಲೆ. ಆದುದರಿಂದ ಬಿಲ್ಲು ವಿದ್ಯೆಯೇ ಹೆಚ್ಚಿನದು" ಎಂದನು ಸುಧನ್ವ.

ಆದರೆ ರಾಮಶಾಸ್ತ್ರಿ ಅದನ್ನೊಪ್ಪದೆ, "ಎಷ್ಟಾದರೂ ನಿನ್ನ ವಿದ್ಯೆ ಕಾಡುಗಳಲ್ಲಿ ಉಪಯೋಗಬೀಳುವುದು ನಿಜವಾದರೂ, ಮನುಷ್ಯರ ನಡುವಿನಲ್ಲಿ ಅದೇನೂ ಪ್ರಯೋಜಕ್ಕೆ ಬಾರದು. ಮನುಷ್ಯರ ಜೀವನಕ್ಕೆ ಮುಖ್ಯವಾಗಿ ಬೇಕಾದುದು ಉಲ್ಲಾಸ, ಉತ್ಸಾಹ. ಅವರಿಗೆ ಉಲ್ಲಾಸವನ್ನೂ, ಉತ್ಸಾಹವನ್ನೂ ಹುಟ್ಟಿಸಿ, ದಿನದಿನದ ಕಷ್ಟಗಳು ಮರೆತು ಹೋಗುವಂತೆ ಮಾಡಿ. ಇಹವೂ ಪರವೂ ದಕ್ಕುವಂತೆ ಮಾಡುವಂಥಾದ್ದು ನನ್ನ ವಿದ್ಯೆಯೇ. ನನ ಹರಿಕಥೆಗಳನು ಕೇಳಿ ಆನಂದಿಸದಿರುವ ಮನುಷ್ಯನನ್ನು ನಾನು ಈವರೆಗೂ ನೋಡಲಿಲ್ಲ. ಹೀಗೆ ಎಲ್ಲರಿಗೂ ಆನಂದ ಬರಿಸುವಂಥಾದ್ದೇ ದೊಡ್ಡ ವಿದ್ಯೆಯಲ್ಲದೆ. ನಿನ್ನ ಬಿಲ್ಲು ವಿದ್ಯೆ ದೊಡ್ಡದೆಂದರೆ ಒಪ್ಪಲಾರೆ" ಎಂದನು.

ಆಗ ವೀರಯ್ಯ ಅವರ ನಡುವೆ ಬಾಯಿ ಹಾಕಿ. "ಏಕೆ ಸುಮ್ಮನೆ ವಾದವಿವಾದ ಮಾಡಿಕೊಳ್ಳುವಿರಿ ಬಿಡಿ! ನಿಜ ನೋಡಿದರೆ ಎಲ್ಲಾ ವಿದ್ಯೆಗಳೂ ದೊಡ್ಡವೇ. ಯಾವ ವಿದ್ಯೆಯಾದರೂ ಸಮಯ ಸಂದರ್ಭಗಳಿಗೆ ತಕ್ಕ ಹಾಗೆ ಪ್ರಕಾಶಿಸುತ್ತದೆ. ಒಂದು ವಿದ್ಯೆ ಹೆಚ್ಚು, ಮತ್ತೊಂದು ಕಡಿಮೆ ಅನ್ನುವುದು ತಪ್ಪೆಂದೇ ನನಗೆ ತೋರುತ್ತದೆ" ಎಂದನು.

"ಅಂದರೆ ನಿನ್ನ ವಿದ್ಯೆ ಕೂಡಾ ನಮ್ಮ ವಿದ್ಯೆಗಳೊಂದಿಗೆ ಸರಿಸಮವೆಂಬುದೇ ನಿನ್ನ ಉದ್ದೇಶವೋ? ನಮ್ಮ ವಿದ್ಯೆಗಳಲ್ಲಿ ಯಾವುದು ಹೆಚ್ಚಿನದೆಂದು ಆಮೇಲೆ ನೋಡಿಕೊಳ್ಳುತ್ತೇವೆ. ಆದರೆ, ವೀರಯ್ಯ, ನಿನ್ನ ವಿದ್ಯೆ ಮಾತ್ರ ನಮ್ಮಿಬ್ಬರ ವಿದೆಗಳ ಮುಂದೆ ಕೆಳಗಿನ ಮಟ್ಟದ್ದೇ ಸರಿ!" ಎಂದು ರಾಮಶಾಸ್ತ್ರಿಯೂ ಸುಧನ್ವನೂ ಒಂದೇ ಬಗೆಯಾಗಿ ಹೇಳಿದರು.

"ಅಯ್ಯಾ, ನಿಮ್ಮೊಂದಿಗೆ ವಾದಮಾಡಲು ನನಗೇನೂ ಇಷ್ಟವಿಲ್ಲ. ವಾದವೇ ಬೇಡ ಅಂದೆ ಅಷ್ಟೇ. ಈಗ ಅಡಿಗೆಗೆ ವೇಳೆಯಾಯಿತು. ಸಮೀಪದಲ್ಲಿ ಯಾವದೋ ಕೆರೆಯೂ ಇದೆ" ಎಂದ ವೀರಯ್ಯ.



ಆ ಹೊತ್ತಿನ ಅಡಿಗೆಯ ಬಾಧ್ಯತೆ ವೀರಯ್ಯನದಾಗಿತ್ತು. ಅಂತೆಯೇ ಅವನು ತಕ್ಕ ಜಾಗದಲ್ಲಿ ಅಡಿಗೆಗೆ ಉಪಕ್ರಮಿಸಿದನು. ಉಳಿದಿಬ್ಬರೂ ಸ್ವಲ್ಪ ಹೊತ್ತು ಕಾಡಿನೊಳಗಿನ ವಿಶೇಷಗಳನ್ನು ನೋಡಲು ಹೊರಟರು. ಅವರು ಅಡವಿಯೊಳಗಿನ ಚಿತ್ರವಿಚಿತ್ರವಾದ ಗಿಡ ಮರಗಳನ್ನೂ ಸೌಂದರ್ಯವನ್ನೂ ನೋಡುತ್ತ ಸ್ವಲ್ಪದೂರ ಹೋಗಿರಬಹುದಷ್ಟೇ.

ಅಷ್ಟರಲ್ಲಿ ರಾಮಶಾಸ್ತ್ರಿಯ ಆರ್ತನಾದವು ವೀರಯ್ಯನ ಕಿವಿಗೆ ಬಿತ್ತು. ವೀರಯ್ಯ ಎದ್ದು ನಿಂತು ಆ ಕಡೆಗೆ ತಿರುಗಿನೋಡಿದನು. ದೂರದಲ್ಲಿ ರಾಮಶಾಸ್ತ್ರಿಯೂ ಸುಧನ್ವನೂ, ಅವರನ್ನು ಮುತ್ತಿಕೊಂಡು ದೌರ್ಜನ್ಯ ನಡೆಸುತ್ತಿದ್ದ ನಾಲ್ಕುಮಂದಿ ಕಳ್ಳರೊಂದಿಗೆ ಎಳೆದಾಡಿಕೊಂಡಿದ್ದರು.

ರಾಮಶಾಸ್ತ್ರಿಯ ಮಾತಿನ ಚಮತ್ಕಾರ ಪಾಂಡಿತ್ಯಗಳೊಂದೂ ಕಳ್ಳರನ್ನು ಮುಗ್ಧತೆಗೊಳಿಸಿದಂತೆ ಕಾಣಲಿಲ್ಲ. ಕಳ್ಳರು ತೀರಾ ಸಮೀಪದಲ್ಲಿದ್ದುದರಿಂದ ಸುಧನ್ವನ ಬಿಲ್ಲು ಕೂಡಾ ನಿಷ್ಪ್ರಯೋಜಕವಾಗಿತ್ತು.

ವೀರಯ್ಯನು ತಟ್ಟನೆ ತನ ತಾಲೀಮಿನ ದೊಣ್ಣೆ ಎತ್ತಿಕೊಂಡು ಓಡುತ್ತಾ ಹೋಗಿ ಕಳ್ಳರ ಮೇಲೆ ಕಲೆಬಿದ್ದನು. ಕಳ್ಳರು ಉಳಿದಿಬ್ಬರನ್ನು ಬಿಟ್ಟು ವೀರಯ್ಯನ ಮೇಲೆ ಬೀಳಲು ಬಂದರು. ಆದರೆ ವೀರಯ್ಯನ ದೊಣ್ಣೆ ತಿರುಗಿಸುವ ಚಮತ್ಕಾರ ಚಕ್ರದಲ್ಲಿ ಕಳ್ಳರ ತಲೆಗಳು ಒಡೆದು ಹೋದ ಭ್ರಮೆಯಾಗಿ, ಹೆದರಿ ಅವರು ಕಾಲಿನ ಬಲಕ್ಕೆ ಶರಣಾಗಿ ಕಾಡಿನೊಳಗೆ ಓಡಿಹೋದರು.

ಆಗ ರಾಮಶಾಸ್ತ್ರಿಯೂ ಸುಧನ್ವನೂ, ನಾಚಿಕೆಯಿಂದ, "ಅಪ್ಪಾ, ವೀರಯ್ಯ, ಈ ದಿನ ನೀನು ಇಲ್ಲದಿರುತ್ತಿದ್ದರೆ ಆ ಕಳ್ಳರು ನಮ್ಮ ಪ್ರಾಣ ತೆಗೆದು ನಮ್ಮಲ್ಲಿದ್ದುದನ್ನೆಲ್ಲಾ ದೋಚಿಕೊಂಡು ಹೋಗುತ್ತಿದ್ದರು. ಅಜ್ಞಾನದಿಂದ ನಮ್ಮ ವಿದ್ಯೆಗಳೇ ದೊಡ್ಡದೆಂದು ಬೀಗಿದೆವಪ್ಪಾ. ಅಹಂಕಾರದ ನಮ್ಮ ಮಾತುಗಳನ್ನು ಕ್ಷಮಿಸಿಬಿಡು. ನಿಸ್ಸಂದೇಹವಾಗಿಯೂ ನಿನ್ನ ವಿದ್ಯೆಯೇ ನಮ್ಮಿಬ್ಬರ ವಿದ್ಯೆಗಳಿಗಿಂತಲೂ ಹೆಚ್ಚಿನದು" ಎಂದರು.

"ಹಾಗೇನಿಲ್ಲ. ಯಾವ ವಿದ್ಯೆಯಾದರೂ ಸಮಯವನ್ನು ಹಿಡಿದು, ಸಂದರ್ಭವನ್ನು ಹಿಡಿದು ಬೆಳಗುತ್ತದೆಂದು ನಾನು ಮೊದಲೇ ಹೇಳಿದ್ದೆನಲ್ಲ? ನಮ್ಮ ವಿದ್ಯೆಗಳನ್ನು ನೋಡಿ ನಾವು ಗರ್ವಪಡಬಾರದು. ಇನೊಬ್ಬರ ವಿದ್ಯೆಯನ್ನು ಕಡಿಮೆ ಮಾಡಲೂ ಬಾರದು. ಎಲ್ಲಾ ವಿದ್ಯೆಯೂ ದೊಡ್ಡದೇ" ಎಂದ ವೀರಯ್ಯ. ಅನಂತರ ಮೂವರೂ ರಾಜಧಾನಿಗೆ ಹೋಗಿ ತಮ್ಮ ವಿದ್ಯೆಗಳನ್ನು ಪ್ರದರ್ಶಿಸಿ, ತಮ್ಮ ತಮ್ಮ ಸಾಮರ್ಥ್ಯಗಳಿಗೆ ತಕ್ಕ ಹಾಗೆ ರಾಜನಿಂದ ಬಹುಮಾನ ಪಡೆದರು.





# ದೇವೀಭಾಗವತ

ಪೌರಾಣಿಕ ವಾತಾವರಣವೆಂದು ಪ್ರಸಿದ್ಧವಾದ ನೈಮಿಶಾರಣ್ಯದಲ್ಲಿ ಸೂತನೆಂಬ ಮಹಾಪುರಾಣಿಕನು, ತಾನು ವ್ಯಾಸಮುನಿಯಿಂದ ಕೇಳಿಕೊಂಡ ಅನೇಕ ಪುರಾಣಗಳನ್ನು ಅಲ್ಲಿಯ ಮುನಿಗಳ ಮುಂದೆ ಹೇಳಿದನು.

ಹಾಗೆ ಹೇಳುತ್ತಾ ಯಾವುದೋ ಸಂದರ್ಭದಲ್ಲಿ ಸೂತನು ಶೌನಕಾದಿ ಮುನಿಗಳೊಂದಿಗೆ ದೇವೀ ಭಾಗವತವೆಂಬ ದಿವ್ಯ ಪುರಾಣವೊಂದಿರುವುದಾಗಿ ಸೂಚಿಸಿದ್ದನು. ಅದನ್ನು ನೆನಪಿಟ್ಟುಕೊಂಡು ಒಂದು ದಿನ ಶೌನಕಮುನಿ ಸೂತಪುರಾಣಿಕನಿಗೆ ಆ ವಿಷಯ ವನ್ನು ಜ್ಞಾಪಕ ಪಡಿಸಿ, ಅದನ್ನು ಹೇಳಬೇಕೆಂದು ಕೇಳಿಕೊಂಡನು.

ಸೂತನು ಒಪ್ಪಿಕೊಂಡು ಅಲ್ಲಿ ಸೇರಿದ ಶೌನಕಾದಿ ಮುನಿಗಳಿಗೆ ದೇವೀ ಭಾಗವತವನ್ನು ವಿವರಿಸಿ ಹೇಳತೊಡಗಿದನು. ಮೊದಲುಸೂತನು ಆದಿಶಕ್ತಿ ಯನ್ನು ಕುರಿತು ಪ್ರಾರಂಭಿಸಿದನು: "ಆದಿ ಶಕ್ತಿಯೇ ಮಹಾಶಕ್ತಿ. ಸಕಲ ವಿದ್ಯೆಗಳೂ ಅವಳೇ. ಎಲ್ಲಾ ಲೋಕಗಳೂ ಅವಳನ್ನೇ ಆಶ್ರಯಿಸಿ ಕೊಂಡಿವೆ. ಸೃಷ್ಟಿ ಸ್ಥಿತಿ ಲಯಗಳನ್ನು ಉಂಟು ಮಾಡುವವಳೂ ಅವಳೇ. ಅವುಗಳಲ್ಲಿ ಅವಳು ಪ್ರತ್ಯಕ್ಷ ಕಾಣಿಸದಿದ್ದರೂ. ಅವಳ ಪ್ರೇರಣೆಯಿಂದಲೇ ತ್ರಿಮೂರ್ತಿಗಳು ಆ ವಿಧಿಗಳನ್ನು ನಿರ್ವಹಿಸುತ್ತಾರೆ. ಬ್ರಹ್ಮನು ವಿಷ್ಣುವಿನ ನಾಭಿಕಮಲದಲ್ಲಿ ಹುಟ್ಟಿದನು. ವಿಷ್ಣುವಿಗೆ ಆಧಾರವಾಗಿರುವವನು ಆದಿಶೇಷ. ಜಲದ ಆಧಾರದಲ್ಲಿ ಆದಿಶೇಷನಿದ್ದಾನೆ. ಆ ಜಲ ಕ್ಕೆಲ್ಲಾ ಆಧಾರವಾದವಳು ಮಹಾಶಕ್ತಿ. ಅವಳೇ ಆದಿಶಕ್ತಿ. ಲೋಕಮಾತೆ. ಅಂತಹ ಮಹಾದೇವಿಗೆ ಸಂಬಂಧಿಸಿದ್ದೇ ದೇವೀಭಾಗವತ.

ಸೂತಪುರಾಣಿಕನಿಂದ ದೇವೀಭಾಗವತವನ್ನು ಕೇಳುವ ಕುತೂಹಲ್ಲದಲ್ಲಿರುವ ಮುನಿಗಳಿಗೆ ಆದಿ ಶಕ್ತಿಯ ಮಹತ್ವ ತಿಳಿದಾಗ, ಒಂದು ಹಳೆಯ ನೆನಪು ಬಂದಿತು. ಆಗ ಮುನಿಗಳ ಪರವಾಗಿ ಶೌನಕನು ಸೂತನೊಂದಿಗೆ "ಅಯ್ಯಾ, ಒಂದು ಕಾಲದಲ್ಲಿ ಬ್ರಹ್ಮನು ನಮಗೊಂದು ಚಕ್ರವನ್ನು ಕೊಟ್ಟು, ಅದರ

೧. ಸೂತಪುರಾಣಿಕರು, ಶೌನಕಾದಿಗಳು



ನೇಮಿ ಯಾವ ಪ್ರದೇಶದಲ್ಲಿ ಒಡೆಯುವುದೋ ಆ ಪ್ರದೇಶವು ಪವಿತ್ರವಾಗುವುದರಿಂದ, ಆ ಪ್ರಾಂತಕ್ಕೆ ಕಲಿಯು ಪ್ರವೇಶವಾಗದು ಎಂದು ಹೇಳಿದನು. ಆ ಚಕ್ರವು ಈ ಅರಣ್ಯಪ್ರದೇಶದಲ್ಲಿ ಒಡೆದುಹೋಯಿತು. ಆದುದರಿಂದ ಇದಕ್ಕೆ ನೈಮಿಶಾರಣ್ಯವೆಂಬ ಹೆಸರೂ ಬಂತು. ನಾವೆಲ್ಲಾ ಇಲ್ಲಿಯೇ ಇದ್ದುಬಿಟ್ಟೆವು. ಕೃತಯುಗವು ಬರುವವರೆಗೂ ಇರುತ್ತೇವೆ. ಕಲಿಯ ಭಯವೇ ನಮಗಿಲ್ಲ. ಇಲ್ಲಿ ನಮಗೆ ಪುಣ್ಯಕಥಾಕಾಲಕ್ಷೇಪದ ಹೊರತು ಬೇರೇನೂ ಇಲ್ಲ. ಅಂತೆಯೇ ಈಗ ನೀವು ಪುಣ್ಯಪ್ರದವಾದ ದೇವೀಭಾಗವತವೆಂಬ ಹೊಸ ಪುರಾಣ ಪ್ರಾರಂಭಿಸಿದ್ದೀರಿ. ಮುಂದುವರಿಸಿರಿ" ಎಂದನು.

ಸೂತನು ಹೇಳತೊಡಗಿದನು: "ವ್ಯಾಸಮಹಾಮುನಿ ನನಗೆ ಹೇಗೆ ಹೇಳಿದನೋ ಹಾಗೆಯೇ ನಿಮಗೆ ದೇವೀಭಾಗವತ ಹೇಳುತ್ತೇನೆ. ಈಗ ಇಪ್ಪತ್ತೇಳು ದ್ವಾಪರಗಳು ಕಳೆದು ಇಪ್ಪತ್ತೆಂಟನೆಯ ದ್ವಾಪರವು ನಡೆಯುತ್ತಿದೆ. ಪ್ರತಿ ದ್ವಾಪರದಲ್ಲಿ ಒಬ್ಬ ವ್ಯಾಸನು ಹುಟ್ಟಿದ್ದಾನೆ. ವೇದಗಳನ್ನು ವಿಭಜಿಸಿ ಪುರಾಣಗಳನ್ನು ರಚಿಸಿದವನು ಸಾತ್ಯವತೀಯನೆಂಬ ವ್ಯಾಸನೇ (ಸತ್ಯವತಿಯ ಮಗ) ನಮಗೆ ಗುರು. ಆತನು ತನ್ನ ಮಗನಾದ ಶುಕನಿಗೆ ಈ ದೇವೀಭಾಗವತವನ್ನು ಹೇಳುತ್ತಿದ್ದಾಗ ನಾನು ಭಕ್ತಿಶ್ರದ್ಧೆಗಳಿಂದ ಕೇಳಿ ತಿಳಿದುಕೊಂಡೆನು. ಅಳಿಯನ ಜತೆ ತಿನ್ನಬೇಕು, ಕಿವಿಗಳ ಜತೆ ಕೇಳಬೇಕು ಎನ್ನುವರಷ್ಟೆ? ಈ ದೇವೀಭಾಗವತವನ್ನು ಕೇಳಿ ಶುಕನು ತಾರಕನಾದನು. ನಿಜಕ್ಕೂ ಈ ಪುರಾಣ ಕೇಳಿದವರು ಕಷ್ಟಗಳನ್ನು ದಾಟುವರು"

ಇದನ್ನು ಕೇಳಿ ಮುನಿಗಳು ಸೂತನನ್ನು ಕುರಿತು, "ಶುಕನು ವ್ಯಾಸನ ಮಗನು ಹೇಗಾದನು? ಅವನು ಅರಣಿಯಲ್ಲಿ ಹುಟ್ಟಿದವನೆಂದು ಹೇಳುವುದನ್ನು ಕೇಳಿದ್ದೇವಲ್ಲಾ?" ಎಂದು ಕೇಳಿದರು. ಆಗ ಸೂತನು ಮುನಿಗಳಿಗೆ ಶುಕನ ಜನ್ಮವೃತ್ತಾಂತವನ್ನು ವಿಸ್ತಾರವಾಗಿ ಹೇಳಿದನು:

ಒಂದುಸಾರಿ ವ್ಯಾಸನು ಸರಸ್ವತೀನದಿಯ ತೀರದಲ್ಲಿ ತಪಸ್ಸು ಮಾಡುತ್ತಿದ್ದಾಗ ಪಕ್ಷಿಗಳು ಜೋಡಿ ಜೋಡಿಯಾಗಿ ಜೀವಿಸುತ್ತ ಮರಿಗಳನ್ನು ಪಡೆಯುವುದನ್ನೂ ಅವುಗಳ ಬಾಯಿಗೆ ಆಹಾರ ಊಡುವುದನ್ನೂ, ಅವು ನುಂಗುವ ಚಂದ ನೋಡಿ ಆನಂದಿಸುವುದನ್ನೂ ನೋಡುತ್ತಿರುವಾಗ ತನಗೂ ಸಂತಾನ ಭಾಗ್ಯವಿರುತ್ತಿದ್ದರೆ ಹೀಗೆ ಸಂತೋಷಪಡಬಹುದಿತ್ತಲ್ಲಾ ಎಂದು ತೋರಿತು. ಮದುವೆಯಾಗಿ ಹೆಂಡತಿಯೊಂದಿಗೆ ಜೋಡಿಯಾಗಿರುವುದೂ ಆನಂದದಾಯಕವೆನಿಸಿತು. ಆಗ ಮಗನನ್ನು ಪಡೆಯಬಹುದು. ಅವನು ಬೆಳೆದು ದೊಡ್ಡವನಾಗಲು, ಅವನಿಗೆ ಮದುವೆ ಮಾಡಿ ಮುದ್ದಾದ ಸೊಸೆಯನ್ನು ನೋಡಿ ಆನಂದಿಸಬಹುದು. ಪುತ್ರರಿದ್ದರೆ ಎಷ್ಟೆಲ್ಲ ಲಾಭಗಳು? ಮುದುಕತನದಲ್ಲಿ ಶ್ರದ್ಧೆಯಿಂದ ಸೇವೆ ಮಾಡುತ್ತಾರೆ. ಧನವನು ಸಂಪಾದಿಸಿ ತರುತ್ತಾರೆ.

ಸತ್ತರೆ ಬಾಯಿಗೆ ನೀರು ಸುರಿದು ಅಗ್ನಿಸಂಸ್ಕಾರ ಮಾಡುತ್ತಾರೆ. ಉತ್ತಮ ಲೋಕಗಳು ಸಿಗಬೇಕಾದರೆ ಪುತ್ರರು ಮಾಡುವ ಪಿಂಡಪ್ರದಾನಗಳು ಬೇಕು. ಆದುದರಿಂದ ಮನುಷ್ಯನಿಗೆ ಮಕ್ಕಳಿಗಿಂತ ಹೆಚ್ಚಿನ ಸುಖ ಬೇರೊಂದಿಲ್ಲ. ಪ್ರಪಂಚದಲ್ಲಿ ಹುಟ್ಟಿದ ಮೇಲೆ ಹೇಗಾದರೂ ಪುತ್ರಭಾಗ್ಯ ಪಡೆಯಲೇಬೇಕು.

ಹೀಗೆಂದುಕೊಂಡು ವ್ಯಾಸನು ಪುತ್ರರನ್ನು ಪಡೆಯುವ ನಿಮಿತ್ತವಾಗಿ ಕಾಂಚನಾದ್ರಿಗೆ ಹೋಗಿ, ಯಾವ ದೇವನನ್ನು ಆರಾಧಿಸಿದರೆ ತನ್ನ ಕೋರಿಕೆ ಬೇಗನೆ ನೆರವೇರುವುದೋ ಎಂದು ಆಲೋಚಿಸ ತೊಡಗಿದನು.

ಆಗ ತ್ರಿಲೋಕಸಂಚಾರಿಯಾದ ನಾರದನು ಆತನ ಬಳಿಗೆ ಬಂದು ನಿಂತನು. ಅವನನ್ನು ನೋಡಿದ ಕೂಡಲೇ ವ್ಯಾಸನು ನಮಸ್ಕಾರ ಮಾಡಿ "ಸ್ವಾಮಿ! ಸಮಯಕ್ಕೆ ಸರಿಯಾಗಿ ಬಂದಿರಿ. ತ್ರಿಕಾಲಜ್ಞಾನಿಗಳಾದ ನೀವು ನನ್ನ ಕೋರಿಕೆತೀರಿಸಲಿಕ್ಕಾಗಿಯೇ ಬಂದಿರಬೇಕು" ಎಂದನು.

"ನೀವು ಸರ್ವಜ್ಞರು. ನಿಮಗೆ ಒಬ್ಬರ ಸಹಾಯ ಬೇಕಾಗುವುದುಂಟೆ? ಆದರೂ ನಿಮ್ಮ ಕೋರಿಕೆ ಏನೆಂಬುದನ್ನು ದಯವಿಟ್ಟು ನೀವೇ ಹೇಳಿಬಿಡಿ" ಎಂದನು ನಾರದ.

"ಪುತ್ರನಿಲ್ಲದವನಿಗೆ ಪರಲೋಕವಿಲ್ಲವಷ್ಟೆ? ಅದೇ ನನಗೆ ಬೇಕು. ಯಾವ ದೇವನನ್ನು ಪ್ರಾರ್ಥಿಸಿದರೆ ನನಗೆ ಪುತ್ರ ಭಾಗ್ಯ ಸಿಗುತ್ತದೆಂದು ನೀವೇ ಹೇಳಬೇಕು" ಎಂದನು ವ್ಯಾಸ.

ಆದಕ್ಕೆ ನಾರದನು ಹೀಗೆ ಹೇಳಿದನು: "ಹಿಂದೆ ಒಂದುಸಾರಿ ನನ ತಂದೆಯಾದ ಬ್ರಹ್ಮನಿಗೆ ಇದೇ ಸಂದೇಹ ಬಂದಿತು. ಅವನು ವಿಷ್ಣುಲೋಕಕ್ಕೆ ಹೋಗಿ ವಿಷ್ಣುವನ್ನು ನೋಡಿ, "ಮಹಾವಿಷ್ಣುವೇ! ಎಲ್ಲಾ ದೇವತೆಗಳಿಗಿಂಲೂ ಮೇಲಾಗಿ ನೀನೇ ಸರ್ವೋತ್ತಮನಾಗಿರುವವನೆಂದು ಭಾವಿಸಿದ್ದೇನೆ. ಇದು



ಸರಿಯೋ ತಪ್ಪೋ ಎಂಬುದನ್ನು ನೀನೇ ಹೇಳಬೇಕು" ಎಂದು ಕೇಳಿಕೊಂಡನು.

ಆದಕ್ಕೆ ವಿಷ್ಣು, "ಬ್ರಹ್ಮಾ, ನೀನು ಸೃಷ್ಟಿಸುವವನೆಂದೂ, ನಾನು ಅಭಿವೃದ್ಧಿಪಡಿಸುವವನೆಂದೂ, ಶಿವನು ಸಂಹರಿಸಿ ಲಯಮಾಡುವವನೆಂದೂ ಸರ್ವಸಾಧಾರಣವಾಗಿ ಎಲ್ಲರೂ ಅಂದುಕೊಂಡಿದ್ದಾರೆ. ಇದು ಸರಿಯಲ್ಲ. ತೇಜಸ್ಸಿನೊಂದಿಗೆ ಕೂಡಿದ ಆದಿಶಕ್ತಿ ಮಾತ್ರವೇ ಸೃಷ್ಟಿ ಮಾಡುವಳೆಂದು ಬುದ್ಧಿವಂತರಾದವರು ತಿಳಿದುಕೊಳ್ಳುತ್ತಾರೆ. ನಾವು ಮೂವರೂ ಸೃಷ್ಟಿ ಸ್ಥಿತಿ ಲಯಗಳನ್ನು ಮಾಡುತ್ತಿದ್ದೇವೆಂದರೆ, ಆದಕ್ಕೆ ನಿನ್ನ ರಜಸ್ಸೂ, ನನ್ನ ಸತ್ವವೂ, ಶಿವನ ತಮಸ್ಸೂ ಕಾರಣವಾಗುತ್ತವೆ. ಅದು ನಮ್ಮ ನಮ್ಮಲ್ಲಿ ಇಲ್ಲದೆ ಹೋಗಿದ್ದರೆ ನಮಗೆ ಕವಡಿಯ ಬೆಲೆಯೂ ಇಲ್ಲ. ನಾನು ಈ ಶೇಷತಲ್ಪದಲ್ಲಿ ಮಲಗಿದ್ದರೂ, ಲಕ್ಷ್ಮಿಯೊಂದಿಗೆ ಆರಾಮಗಳಲ್ಲಿ ವಿಹರಿಸುತ್ತಿದ್ದರೂ, ಗರ್ವಿಷ್ಠರಾದ ರಾಕ್ಷಸರನ್ನು ಕೊಂದರೂ



ಆದಿಶಕ್ತಿಯ ದಯದಿಂದಲೇ ಎಂದು ತಿಳಿ. ನಾನು ಸ್ವತಂತ್ರನೆಂದು ಎಂದಿಗೂ ಭಾವಿಸಬೇಡ. ಹಿಂದೆ ನಾನು ಮಧುಕೈಟಭರೆಂಬ ದಾನವರೊಂದಿಗೆ ಐದು ಸಾವಿರ ವರ್ಷ ಹೋರಾಡಿ ಕಡೆಗೆ ಜಯಪಡೆದುದು ಆದಿಶಕ್ತಿಯ ಸಹಾಯದಿಂದತಾನೇ? ಹಿಂದೆ ಒಂದು ಸಾರಿ ಬಿಲ್ಲು ಹಗ್ಗ ಕಡಿದು ನನ್ನ ತಲೆ ಹಾರಿ ಹೋದಾಗ ನೀನು ದೇವಶಿಲ್ಪಿಯಿಂದ ಕುದುರೆಯ ತಲೆಯನ್ನು ಹೊಂದಿಸಿ ಕೊಟ್ಟೆಯಷ್ಟೆ? ಆ ವಿಧವಾಗಿ ನಾನು ಹಯಗ್ರೀವನಾದುದು ನೆನಪಿದೆಯಷ್ಟೆ? ಆದುದರಿಂದ ನಾನು ಕೂಡಾ ಆದಿಶಕ್ತಿಗೆ ಅಧೀನನಾದವನೇ. ಆ ಶಕ್ತಿಗೆ ಮೀರಿದುದು ಲೋಕಗಳಲ್ಲಿ ಮತ್ತೊಂದಿಲ್ಲವೆಂದು ನಾನು ಗಟ್ಟಿಯಾಗಿ ಹೇಳುತ್ತೇನೆ" ಎಂದನು.

ಹೀಗೆಂದು ನಾರದನು ವ್ಯಾಸನೊಂದಿಗೆ, "ನೀವು ಆದಿಶಕ್ತಿಯನ್ನು ಬೇಡಿಕೊಂಡರೆ ನಿಮ್ಮ ಕೋರಿಕೆ ಈಡೇರುತ್ತದೆ" ಎಂದನು.

"ಆದರಂತೆ ವ್ಯಾಸನು ಲೋಕಮಾತೆಯನ್ನು ಕುರಿತು ತಪಸ್ಸು ಮಾಡಿದನು" ಎಂದು ಸೂತ ಪೌರಾಣಿಕನು ಶೌನಕಾದಿಗಳಿಗೆ ಹೇಳಿದನು.

ಕೂಡಲೇ ಮುನಿಗಳು, "ವಿಷ್ಣುವಿನ ತಲೆ ಹಾರಿ ಹೋಯಿತೆಂದಿರಲ್ಲಾ! ಇದು ಬಹಳ ಅದ್ಭುತವಾದ ಸಂಗತಿ. ಅದು ಹೇಗಾಯಿತು? ಆತನಿಗೆ ಕುದುರೆಯ ತಲೆ ಹೇಗೆ ಅಂಟಿಸಿದರು? ಇದನ್ನೆಲ್ಲಾ ವಿವರಿಸಿ ಹೇಳಬೇಕು" ಎಂದರು.

### ಹಯಗ್ರೀವಾವತಾರ

ಪೂರ್ವಕಾಲದಲ್ಲಿ ವಿಷ್ಣು ರಾಕ್ಷಸರೊಂದಿಗೆ ಎಡೆ ತೆರವಿಲ್ಲದೆ ಹತ್ತು ಸಾವಿರ ವರ್ಷಗಳ ವರೆಗೆ ಯುದ್ಧ ಮಾಡಿ ಜಯಿಸುತ್ತ, ತುಂಬಾ ಆಯಾಸಗೊಂಡನು. ನಾಣೆಳೆದು ಬಿಗಿಯಲ್ಪಟ್ಟ ತನ್ನ ಬಿಲ್ಲನ್ನು ಗಡ್ಡದ ಕೆಳಗೆ ಆನಿಸಿಕೊಂಡು ಕುಳಿತು ದಣಿವಾರಿಸಿಕೊಳ್ಳುತ್ತ ನಿದ್ರಿಸಲಾರಂಭಿಸಿದನು.

ಆ ಸಮಯದಲ್ಲಿ ದೇವತೆಗಳು ಒಂದು ಯಜ್ಞವನ್ನು ಪ್ರಾರಂಭಿಸಿ, ಅದಕ್ಕಾಗಿ ವಿಷ್ಣುವನ್ನು ಹುಡುಕುತ್ತ ಬಂದು, ಅವನು ನಿದ್ದೆಯಲ್ಲಿರುವುದನ್ನು ನೋಡಿ, ಏನು ಮಾಡಬೇಕೆಂದು ತೋರದೆ, ಒಬ್ಬರನ್ನೊಬ್ಬರು ನೋಡುತ್ತ ನಿಂತರು.

ಆಗ ಶಿವನು ಬ್ರಹ್ಮನೊಂದಿಗೆ "ಒಂದು ಉಪಾಯ ಮಾಡು. ನೀನು ಒಂದು ಹುಳವನ್ನು ಸೃಷ್ಟಿಸಿ, ಅದರಿಂದ ಬಿಲ್ಲಿನ ನಾರನ್ನು ಕಡಿಸಿಬಿಡು. ನಾರು ಕಡಿದ ಕೂಡಲೇ ಬಿಲ್ಲು ಮೇಲಕ್ಕೇಳುತ್ತದೆ. ಕೂಡಲೇ ವಿಷ್ಣು ನಿದ್ದೆಯಿಂದೇಳುತ್ತಾನೆ. ಯಜ್ಞ ನಿರ್ವಿಘ್ನವಾಗಿ ಸಾಗುತ್ತದೆ" ಎಂದನು.

ಬ್ರಹ್ಮನು ಕೂಡಲೇ ಹುಳವನ್ನು ಹುಟ್ಟಿಸಿ ಬಿಲ್ಲಿಗೆ ಕಟ್ಟಿದ ನಾರು ದಾರವನ್ನು ಕಡಿಯಲು ಹೇಳಿದನು. ಅದಕ್ಕೆ ಹುಳ ಹೆದರಿ, "ಮಹಾತ್ಮಾ, ಇಂಥಾ ಕೆಲಸ ನಾನು ಹೇಗೆ ಮಾಡಲಿ? ಮಹಾಪಾಪವಲ್ಲವೆ? ತಾಯಿ ಮಕ್ಕಳನ್ನು ಬೇರ್ಪಡಿಸುವುದು, ಗಂಡ ಹೆಂಡಿ



ರನ್ನು ಅಗಲಿಸುವುದು, ನಿದ್ದೆಯನ್ನು ಭಗ್ನಪಡಿಸುವುದು ಇವೆಲ್ಲಾ ಬ್ರಹ್ಮಹತ್ಯದಂತಹ ಮಹಾಪಾಪಗಳಲ್ಲವೇ? ಇಂಥಾ ಕೆಲಸ ನನ್ನನ್ನು ಮಾಡಲು ಹೇಳುವಿರಾ ?" ಎಂದು ಕೇಳಿತು.

"ಆದಕ್ಕಾಗಿ ಚಿಂತಿಸಬೇಡ. ಯಜ್ಞದಲ್ಲಿ ಅಗ್ನಿಗೆ ಆಹುತಿ ಮಾಡುವಾಗ ಕೆಳಗೆ ಚೆಲ್ಲುವ ವಸ್ತುಗಳನ್ನು ಹೆಕ್ಕಿತಿನ್ನುವ ಪುಣ್ಯ ಕೆಲಸ ನಿನಗೆ ಕೊಡುತ್ತೇನೆ. ನಿನಗೇನೂ ಪಾಪಬಾರದು" ಎಂದನು ಬ್ರಹ್ಮ.

ಹುಳವು ಸಂತೋಷದಿಂದ ಬಿಲ್ಲಿನ ನಾರು ದಾರವನ್ನು ಕಡಿದು ತುಂಡರಿಸಿತು. ಆಗ ದೊಡ್ಡದೊಂದು ಕಠೋರಧ್ವನಿ ಹುಟ್ಟಿ, ಭೂಮಿ ನಡುಗಿತು. ಬಿಲ್ಲಿನ ಕೊನೆ ತಟ್ಟನೆ ಮೇಲಕ್ಕೆ ಹಾರುವಾಗ ವಿಷ್ಣುವಿನ ತಲೆಯೂ ಹಾರಿಹೋಯಿತು.

ಅದನ್ನು ನೋಡಿ ದೇವತೆಗಳು ಹೆದರಿ ಏನೂ ತೋರದೆ, "ಹೇ ದೇವರ ದೇವಾ! ನೀನೇ ಸರ್ವೇಶ್ವರನಾಗಿ, ಎಲ್ಲಾ ಲೋಕಗಳನ್ನೂ ಪಾಲಿಸುವವನಾಗಿರುವಾಗ, ನಿನಗೇ ಇಂಥಾ ಗತಿ ಏಕೆ ಬಂತು ? ಯಾವ ರಾಕ್ಷಸರಿಂದಲೂ ಆಗದ ಕೆಲಸ ಈಗ ಹೇಗಾಯಿತು ? ನೀನು ಮಾಯೆಗಳಿಗೂ ಅತೀತನಾದವನಲ್ಲವೇ ? ಮಾಯೆ ನಿನ್ನನ್ನು ಹೀಗೆ ಮಾಡಿರಲು ಸಾಧ್ಯವೇ ?" ಎಂದು ವಿಲಪಿಸಿದರು.

ಆಗ ದೇವಗುರುವಾದ ಬೃಹಸ್ಪತಿ ಅವರೊಂದಿಗೆ, "ಹೀಗೆ ಅಳುತ್ತಾ ಕುಳಿತರೆ ಏನೂ ಸಾಗಲಾರದು. ನಡೆದು ಹೋದುದಕ್ಕೆ ಉಪಾಯವೇನೆಂಬುದನ್ನು ಈಗ ಯೋಚಿಸಬೇಕು" ಎಂದನು.

"ದೇವತೆಗಳೆಲ್ಲರ ಕಣ್ಣೆದುರಿನಲ್ಲಿಯೇ ವಿಷ್ಣುವಿನ ತಲೆ ಹಾರಿಹೋಗಿದೆ. ಇನ್ನು ನಮ್ಮ ಪ್ರಯತ್ನದಲ್ಲಿ ಏನಿದೆ ? ವಿಶೇಷ ದೈವಬಲದಿಂದಲೇ ಏನಾದರೂ ನಡೆಯ ಬೇಕಾಗಿದೆ" ಎಂದನು ಇಂದ್ರ.

ಆಗ ಬ್ರಹ್ಮನು, "ಯಾವ ಕೆಲಸಕ್ಕಾದರೂ ಜಗದೀಶ್ವರಿಯ ಅನುಗ್ರಹವು ಬೇಕು. ಸೃಷ್ಟಿ ಸ್ಥಿತಿ ಲಯಕಾರಕಳಾದವಳು ಅವಳೇ. ಆದುದರಿಂದ ನೀವೆಲ್ಲರೂ ಆದಿಶಕ್ತಿಯನ್ನು ಪ್ರಾರ್ಥಿಸಿರಿ" ಎಂದು ದೇವತೆಗಳಿಗೆ ಹೇಳಿದನು.

ಎಲ್ಲಾ ದೇವತೆಗಳೂ ಒಂದಾಗಿ ಆದಿಶಕ್ತಿಯನ್ನು ಪ್ರಾರ್ಥಿಸತೊಡಗಿದರು. ಅವರ ಮೇಲೆ ದಯೆ ತಾಳಿ ಮಹಾದೇವಿ ಪ್ರತ್ಯಕ್ಷಳಾದಳು.

"ಮಹಾತಾಯಿಯೇ ! ವಿಷ್ಣುವಿಗೆ ಈ ಗತಿ ಏಕೆ ಬಂದಿತು ? ಆತನ ತಲೆ ಏನಾಯಿತು ? ನಾವು ಮಾಡಬೇಕಾದ ಕರ್ತವ್ಯವೇನು ?" ಎಂದು ದೇವತೆಗಳು ದೇವಿಯನ್ನು ಕೇಳಿದರು.

ದೇವಿ ಈ ರೀತಿ ಪ್ರತ್ಯುತ್ತರ ಕೊಟ್ಟಳು : "ವಿಷ್ಣುವಿಗೆ ಈ ಗತಿ ಏಕೆ ಬಂದಿತೆಂದು ನೀವೆಲ್ಲಾ ಕೇಳುವಿರಿ. ಒಂದು ದಿನ ವಿಷ್ಣು ಶಯ್ಯಾಗಾರದಲ್ಲಿದ್ದ ಲಕ್ಷ್ಮಿಯನ್ನು ನೋಡಿ ನಗಾಡಿದನು. ಅದನ್ನು ನೋಡಿ ಲಕ್ಷ್ಮಿ ಗಾಬರಿಯಾದಳು. ವಿಷ್ಣು ತನ್ನ ಮುಖ ನೋಡಿ ನಗಲು ಕಾರಣವೇನಿರಬೇಕು ? ತನ್ನ

ಮುಖವು ಅನಾಕಾರಿಯಾಗಿದೆಯೋ? ತನಗಿಂತ ಸುಂದರಿಯಾದ ಯಾರನ್ನಾದರೂ ನೋಡಿ ಮೋಹಿಸಿದನೇನು? ಹೀಗೆಂದುಕೊಂಡು ಲಕ್ಷ್ಮಿ ಸವತಿಯ ಕಾಟಕ್ಕಿಂತ ಗಂಡನ ಸಾವೇ ಮೇಲು ಎಂದುಕೊಂಡು ತನ್ನ ಗಂಡನ ತಲೆ ಸಮುದ್ರದಲ್ಲಿ ಬೀಳಲೆಂದು ಶಾಪ ಕೊಟ್ಟಳು. ಆ ಶಾಪ ತಾಗಿ ವಿಷ್ಣುವಿಗೆ ಈ ಗತಿ ಬಂದಿದೆ. ಇದು ಹೀಗಿರುವಾಗ ಹಯಗ್ರೀವನೆಂಬ ರಾಕ್ಷಸನು ನನ್ನನ್ನು ಧ್ಯಾನಿಸಿ ಸಾವಿರ ವರ್ಷಗಳ ವರೆಗೆ ತಪಸ್ಸು ಮಾಡಿದನು. ನಾನು ಅವನ ಮುಂದೆ ಪ್ರತ್ಯಕ್ಷಳಾಗಿ ವರ ಕೇಳಿಕೋ ಅಂದೆನು. ಅವನು ತನಗೆ ಯಾರಿಂದಲೂ ಸಾವು ಬರಬಾರದೆಂದು ವರ ಕೇಳಿದನು. ಹುಟ್ಟಿದ ಪ್ರಾಣಿಗೆ ಸಾವು ತಪ್ಪದು ಎಂದಿರುವುದರಿಂದ ಬೇರೇನಾದರೂ ವರ ಕೇಳುವಂತೆ ಹೇಳಿದೆನು. ಆದಕ್ಕೆ ಅವನು ತಾನು ಹಯಗ್ರೀವನಾದುದರಿಂದ ಹಯಗ್ರೀವನಿಂದಲೇ ತನಗೆ ಮರಣ ಬರುವಂತೆ ವರ ಕೇಳಿದನು. ನಾನೂ ಹಾಗೆಯೇ ವರವನ್ನು ಕೊಟ್ಟೆ. ಆ ರಾಕ್ಷಸನು ತುಂಬಾ ಕೊಬ್ಬಿ ಲೋಕಗಳನ್ನೆಲ್ಲಾ ಕ್ಷೋಭಿಸಿಕೊಂಡಿದ್ದಾನೆ. ಮೂರು ಲೋಕಗಳಲ್ಲಿಯೂ ಅವನನು ಜಯಿಸುವವರು ಯಾರೂ ಇಲ್ಲ. ಆದುದರಿಂದ ನೀವು ಒಂದು ಕುದುರೆಯ ತಲೆಯನ್ನು ತಂದು ವಿಷ್ಣುವಿನ ಶರೀರಕ್ಕೆ ತಗಲಿಸಿ ಹಯಗ್ರೀವನನ್ನು ಸೃಷ್ಟಿಸಿರಿ. ಹಾಗೆ ಮಾಡಿದರೆ ಈ ವಿಷ್ಣು ಹಯಗ್ರೀವ ರಾಕ್ಷಸನನ್ನು ಕೊಂದು ಬಿಡುತ್ತಾನೆ. ಲೋಕದ ಕಂಟಕವು ಪರಿಹಾರವಾಗುತ್ತದೆ. ನಿಮ್ಮ ಕೋರಿಕೆ ನೆರವೇರುತ್ತದೆ."

ಹೀಗೆ ಹೇಳಿ ಆದಿಶಕ್ತಿ ಅಂತರ್ಹಿತೆಯಾದ ಕೂಡಲೇ, ದೇವತೆಗಳು ದೇವಶಿಲ್ಪಿಯನ್ನು ಕರೆದು ಕುದುರೆಯ ತಲೆಯನ್ನು ತಂದು ವಿಷ್ಣುವಿನ ಶರೀರಕ್ಕೆ ಅಂಟಿಸಲು ಹೇಳಿದರು.

ಅದರಂತೆ ದೇವಶಿಲ್ಪಿ ಸುಂದರವಾದ ಕುದುರೆಯ ತಲೆಯನ್ನು ಮಾಡಿ ತಂದು ವಿಷ್ಣು ಶರೀರಕ್ಕೆ ಹೊಂದಿಸಿದನು. ಈ ರೀತಿಯಾಗಿ ವಿಷ್ಣು ಹಯಗ್ರೀವ ಅವತಾರವನ್ನೆತ್ತಿ ವಿಜೃಂಭಿಸಿಕೊಂಡು ಹೋಗಿ, ಹಯಗ್ರೀವ ರಾಕ್ಷಸನನ್ನು ಕೆಣಕಿ, ಮಹಾಯುದ್ಧದಲ್ಲಿ ಕೊಂದು ಲೋಕಗಳಿಗೆ ಕ್ಷೇಮವನ್ನುಂಟುಮಾಡಿದನು. ದೇವತೆಗಳ ಯಜ್ಞವೂ ಪೂರ್ತಿಯಾಯಿತು.



## ಮಧುಕೈಟಭರು

ಇದನೆಲ್ಲಾ ಕೇಳಿ ಶೌನಕಾದಿ ಮುನಿಗಳು ಸೂತ ಪುರಾಣಿಕನನ್ನು ಕುರಿತು, ಮಧುಕೈಟಭರ ಕಥೆಯನ್ನು ಹೇಳಬೇಕೆಂದು ಕೇಳಿದರು. ಸೂತನು ಅವರಿಗೆ ಆ ವೃತ್ತಾಂತವನ್ನು ಹೇಳತೊಡಗಿದನು:

ಹಾಲಿನ ಸಮುದ್ರದಲ್ಲಿ ಶೇಷತಲ್ಪದ ಮೇಲೆ ಮಹಾವಿಷ್ಣು ನಿದ್ದೆ ಮಾಡಿಕೊಂಡಿದ್ದ ಸಮಯದಲ್ಲಿ ಅವನ ಕಿವಿಗಳಿಂದ ಇಬ್ಬರು ರಾಕ್ಷಸರು ಹುಟ್ಟಿ ಕ್ಷೀರ ಸಾಗರಕ್ಕೆ ಬಿದ್ದರು. ಅವರು ನೀರಿನಲ್ಲಿ ಈಜುತ್ತಾ ತಮ್ಮ ಜನ್ಮಕ್ಕೆ ಆಧಾರವೇನೆಂದು ತಿಳಿಯದೆ ಆಶ್ಚರ್ಯಪಡುತ್ತಿದ್ದರು. ಅವರಲ್ಲಿ ಕೈಟಭನೆಂಬವನು

ಮಧುವಿನೊಂದಿಗೆ "ಆಧಾರವಿಲ್ಲದೆ ನಾವು ಹುಟ್ಟಲು ಸಾಧ್ಯವೇ ಇಲ್ಲ. ಈ ಮಹಾಸಮುದ್ರಕ್ಕೂ ನಮಗೂ ಏನೋ ಆಧಾರವಿದ್ದೇ ಇರಬೇಕು" ಎಂದನು.

ಅವನು ಹಾಗೆ ಹೇಳಿ ನಿಲಿಸಿದ್ದೇ ತಡ, ಆಕಾಶದಿಂದೊಂದು ಅಶರೀರವಾಣಿ ಕೇಳಿಸಿತು. ಅದೊಂದು ಮಂತ್ರದಂತಿರಲು, ಮಧುಕೈಟಭರು ಆ ಮಾತನ್ನೇ ಹಿಡಿದುಕೊಂಡು ಜಪಿಸತೊಡಗಿದರು. ಆಗ ಆಕಾಶದಲ್ಲಿ ಮಿಂಚಿನಂತೆ ಹೊಳೆಯುವ ವಸ್ತುವೊಂದು ಕಂಡು ಬಂತು. ಮಧುಕೈಟಭರು ಅದನ್ನು ನೋಡಿ, ಅದು ತಾವು ಜಪಿಸುವ ಆದಿಶಕ್ತಿಯ ಮಂತ್ರದ ತೇಜಸ್ಸೇ ಎಂದು ನಿಶ್ಚಯಿಸಿ, ತಮಗೆ ಮೊದಲು ಕೇಳಿದ ಅದೇ ಧ್ವನಿಮಂತ್ರವನ್ನು ಇನ್ನಷ್ಟು ಭಕ್ತಿಯಿಂದ ಜಪಿಸುತ್ತ ಸಾವಿರ ವರ್ಷ ತಪಸ್ಸು ಮಾಡಿದರು. ಅವರ ತಪಸ್ಸಿಗೆ ಮೆಚ್ಚಿ ಆದಿಶಕ್ತಿ ಪ್ರತ್ಯಕ್ಷಳಾಗಿ ವರ ಕೇಳುವಂತೆ ಹೇಳಿದಳು. ಅವರು ತಮಗೆ ಸ್ವೇಚ್ಛಾಮರಣ ಬರಬೇಕೆಂದು ಕೇಳಿಕೊಂಡರು. ದೇವಿ ಹಾಗೆಯೇ ವರ ಕೊಟ್ಟು ಅಂತರ್ಧಾನಳಾದಳು.

ತರುವಾಯ ಅವರು ಕ್ಷೀರಸಾಗರದಲ್ಲಿಯೇ ಸಂಚರಿಸುತ್ತ ಒಂದು ಕಡೆಯಲ್ಲಿ ಬ್ರಹ್ಮನನ್ನು ನೋಡಿ ತಮ್ಮೊಂದಿಗೆ ಯುದ್ಧಕ್ಕೆ ಬಾರೆಂದು ಕರೆದರು.

"ಬಾ, ನಮ್ಮೊಂದಿಗೆ ಯುದ್ಧಮಾಡು. ಯುದ್ಧ ಮಾಡಲು ಕೈಲಾಗದೆ ಹೋದ ಪಕ್ಷದಲ್ಲಿ ನಿನ್ನ ಪದ್ಮಾಸನವನ್ನು ಬಿಟ್ಟು ಎತ್ತಾದರೂ ಹೊರಟುಹೋಗು" ಎಂದರು ಬ್ರಹ್ಮನೊಂದಿಗೆ ಆ ರಾಕ್ಷಸರು.

ಬ್ರಹ್ಮನು ಹೆದರಿ ಯೋಗಸಮಾಧಿಯಲ್ಲಿದ್ದ ವಿಷ್ಣುವನ್ನು ನೋಡಿ, "ಅಪ್ಪಾ! ಏಳು ಏಳು! ಇಬ್ಬರು ರಾಕ್ಷಸರು ನನ್ನನ್ನು ಕೊಲ್ಲುವುದಕ್ಕೇ ಬಂದಿದ್ದಾರೆ. ನನ್ನನ್ನು ಕಾಪಾಡು ತಂದೆಯೇ!" ಎಂದು ಬೇಡಿಕೊಂಡನು.

ಬ್ರಹ್ಮನ ಕೂಗಿಗೆ ವಿಷ್ಣು ಯೋಗನಿದ್ರೆಯಿಂದ ಎಚ್ಚರವಾಗಲಿಲ್ಲ. ಆಗ ಬ್ರಹ್ಮನಿಗೆ ವಿಷ್ಣುವನ್ನು ಆಕ್ರಮಿಸಿದುದು ಆದಿಶಕ್ತಿಯ ಯೋಗನಿದ್ರೆ ಎಂದು ತಿಳಿಯಿತು. ಆಗ ಅವನು ಆದಿಶಕ್ತಿಯಾದ ಯೋಗನಿದ್ರೆಯನ್ನೇ ಪ್ರಾರ್ಥಿಸತೊಡಗಿದನು.

"ತಾಯೇ! ಈ ರಾಕ್ಷಸರ ಕಾಟದಿಂದ ನನ್ನನ್ನು ಕಾಪಾಡಲು ಮಹಾವಿಷ್ಣುವನ್ನು ಎಬ್ಬಿಸು. ಅಥವಾ ನೀನಾದರೂ ಬಂದು ನನ್ನನ್ನು ಕಾಪಾಡು" ಎಂದು ಮೊರೆಯಿಟ್ಟನು ಬ್ರಹ್ಮ.

ಕೂಡಲೇ ಯೋಗನಿದ್ರೆ ವಿಷ್ಣುವನ್ನು ಬಿಟ್ಟು ಹೊರಟುಹೋದಳು. ಮರುಕ್ಷಣದಲ್ಲಿ ವಿಷ್ಣು ನಿದ್ರೆಯಿಂದ ತಟ್ಟನೆದ್ದು ಕುಳಿತನು. ಅದನ್ನು ನೋಡಿ ಬ್ರಹ್ಮನಿಗೆ ಪರಮಾನಂದವಾಯಿತು. ಮಹಾವಿಷ್ಣುವಿನ ಮುಂದೆ ಸಾಷ್ಟಾಂಗ ನಮಸ್ಕಾರ ಮಾಡಿದನು.



# ಅಪಾತ್ರದಾನ

**ಪ**ದ್ಮನಾಭನೊಬ್ಬ ಸೋಮಾರಿ ಹುಡುಗ. ಸಂಪಾದಿಸುವ ವಯಸ್ಸು ಬಂದರೂ ಅವನು ತನ್ನ ಮೇಲೆಯೇ ಆಧಾರವಿಟ್ಟುಕೊಂಡು ಕುಳಿತಿರುವುದನ್ನು ನೋಡಿ ತಾಯಿಗೆ ತಡೆಯಲಾಗಲಿಲ್ಲ. ಹೋಗಿ ಹಣ ಸಂಪಾದನೆ ಮಾಡಿಕೊಂಡು ಬಾರೆಂದು ಬೈದು ಅವನನ್ನು ಮನೆಯಿಂದ ಹೊರಗೆ ಹಾಕಿದಳು. ಅವನು ಏನೂ ತೋರದೆ ಊರ ಹೊರಗಿನ ಪಾಳು ಗುಡಿಯಲ್ಲಿ ಚಿಂತಿಸುತ್ತಾ ಕುಳಿತನು.

ಗುಡಿಯಲ್ಲಿದ್ದ ಒಂದು ಪಿಶಾಚಿ ಅವನನ್ನು ನೋಡಿ ಮಾತಾಡಿಸುತ್ತ, "ಏನಪ್ಪಾ ನಿನಗೆ ಬಂದ ಕಷ್ಟ?" ಎಂದು ಕೇಳಿತು. "ನನಗೆ ಹಣವಿಲ್ಲದಿರುವುದೇ ಕಷ್ಟ. ಹಣಕ್ಕೇನು ಮಾಡಲಿ?" ಎಂದ ಪದ್ಮನಾಭ. ಪಿಶಾಚಿ ಅವನಿಗೊಂದು ಹಣದ ಗಂಟು ಕೊಟ್ಟು "ಸುಖವಾಗಿರು" ಎಂದಿತು.

ಮಗನು ಹಣದ ಗಂಟಿನೊಂದಿಗೆ ಮನೆಗೆ ಬಂದುದನ್ನು ನೋಡಿ ತಾಯಿ ಸಂತೋಷಿಸಿ, "ಈ ಹಣದಿಂದ ವ್ಯಾಪಾರ ಮಾಡು" ಎಂದಳು.

ಅದನ್ನು ಕೇಳಿ ಪದ್ಮನಾಭನ ಗುಂಡಿಗೆ ಜಾರಿಹೋಯಿತು. ಹಣ ಬಂದುದರಿಂದ ಅವನಿಗೆ ಶ್ರಮ ಹೆಚ್ಚೇ ಆಯಿತು! ಏನು ಮಾಡಲಪ್ಪಾ, ಎಂಬ ಚಿಂತೆಯಲ್ಲಿರುವಾಗ ಆ ರಾತ್ರಿ ಅದೇ ಪಿಶಾಚಿ ಅವನ ಬಳಿಗೆ ಬಂದು "ಈಗ ಸಂತೋಷದಿಂದಿರುವಿಯಷ್ಟೆ?" ಎಂದು ಕೇಳಿತು. ಹಣದಿಂದ ತನ್ನ ಕಷ್ಟ ಹತ್ತು ಪಾಲು ಹೆಚ್ಚಾಯಿತೆಂದು ಗೋಗರೆದ ಸೋಮಾರಿ ಪದ್ಮನಾಭ.

"ನಾನು ಅಪಾತ್ರದಾನ ಮಾಡಿ ಪಿಶಾಚಿಯಾಗಿ, ಸತ್ಪಾತ್ರದಾನದಿಂದ ಈ ಜನ್ಮ ಕಳೆದುಕೊಳ್ಳೋಣವೆಂದುಕೊಂಡೆ. ನೀನೂ ಒಬ್ಬ ಅಪಾತ್ರನೇ!" ಎಂದು ಹೇಳಿ ಪಿಶಾಚಿ ಆ ಹಣದ ಗಂಟನ್ನು ಎತ್ತಿಕೊಂಡು ತನ್ನ ಪಾಡಿಗೆ ಹೊರಟುಹೋಯಿತು.





# ಚಿರಂಜೀವಿಯ ಕಥೆ

ಅನೇಕ ವರ್ಷಗಳ ಹಿಂದೆ ಕಲ್ಯಾಣಸ್ವಾಮಿ ಎಂಬವನು ವಿಂಧ್ಯಾರಣ್ಯದಲ್ಲಿ ಒಂದು ಆಶ್ರಮ ನಿರ್ಮಿಸಿಕೊಂಡು ಗುರುಕುಲವನ್ನು ಪ್ರಾರಂಭಿಸಿದ್ದನು. ತನ್ನ ಬಳಿಗೆ ಬಂದು ಕಲಿಯುವ ವಿದ್ಯಾರ್ಥಿಗಳಿಗೆ ಚೆನ್ನಾಗಿಯೇ ಪಾಠ ಹೇಳಿ ಕೊಡುತ್ತಿದ್ದನು. ವಿದ್ಯಾರ್ಥಿಗಳಾಗಿ ಬರುವವರ ಹತ್ತಿರ "ನೀನು ವಿದ್ಯೆ ಕಲಿಯುವುದರ ಮುಖ್ಯ ಉದ್ದೇಶವೇನು ?" ಎಂದು ಕೇಳುತ್ತಿದ್ದನು. ಈ ಪ್ರಶ್ನೆಗೆ ಪ್ರತಿ ವಿದ್ಯಾರ್ಥಿಯೂ "ಬದುಕುವ ದಾರಿ ನೋಡಲಿಕ್ಕಾಗಿಯೇ" ಎಂದು ಉತ್ತರ ಕೊಡುತ್ತಿದ್ದನು. ಈ ಮಾತು ಕಲ್ಯಾಣಸ್ವಾಮಿಗೆ ತುಂಬಾ ನಿರಾಶೆಯನ್ನುಂಟುಮಾಡುತ್ತಿತ್ತು.

ಆದರೆ ಚಿರಂಜೀವಿ ಎಂಬೊಬ್ಬನು ಶಿಷ್ಯನು ಗುರುವಿನ ಆ ಪ್ರಶ್ನೆಗೆ, "ನಾನು ಕಲಿಯುವ ವಿದ್ಯೆಗಳನ್ನೆಲ್ಲಾ ಮಾನವರ ಸೇವೆಗೇ ಉಪಯೋಗಿಸಬೇಕೆಂದಿದ್ದೇನೆ" ಎಂದನು.

ಆ ಮಾತು ಕೇಳಿ ಕಲ್ಯಾಣಸ್ವಾಮಿ ತುಂಬಾ ಸಂತೋಷಪಟ್ಟು ಐದು ವರ್ಷಗಳವರೆಗೆ ಅವನಿಗೆ ಕಲಿಸಬೇಕಾದುದೆಲ್ಲವನ್ನೂ ಕಲಿಸಿದನು. ಬಳಿಕ ಅವನನ್ನು ಕಳುಹಿಸಿಕೊಡುವಾಗ, "ನೀನು ಹೇಳಿದ ಮಾತನ್ನು ಮರೆಯದೆ, ನಿನ್ನ ಜೀವಿತವನ್ನು ಮಾನವರ ಸೇವೆಗೇ ಅಂಕಿತ ಗೊಳಿಸು." ಎಂದು ಜ್ಞಾಪಕ ಪಡಿಸಿದನು. ಚಿರಂಜೀವಿ ಗುರುವಿನ ಆಶೀರ್ವಾದಗಳನ್ನು ಪಡೆದು ಒಂದಾನೊಂದು ಗ್ರಾಮವನ್ನು ಸೇರಿ ಅಲ್ಲಿ ತನ್ನ ನಿವಾಸವನ್ನು ಏರ್ಪಡಿಸಿಕೊಂಡನು. ಅವನು ಗ್ರಾಮದ ಜನರಿಗೆ ಒಳಿತು ಕೆಡುಕುಗಳನ್ನು ಬೋಧಿಸುತ್ತಿದ್ದನು. ಅವನ ನೀತಿಯು ಮಾತುಗಳಿಗೆ ಜನರು ತಲೆ ದೂಗುತ್ತ ಅವನನ್ನು ತುಂಬ ಆದರಭಾವದಿಂದ ನೋಡುತ್ತಿದ್ದರು.

ಅವನು ಆ ಊರಿಗೆ ಬಂದ ಎಂಟು ಹತ್ತು ದಿನಗಳಲ್ಲಿ ದರೋಡೆಕೋರರ ಸಂಗತಿ ಅವನಿಗೆ ಗೊತ್ತಾಯಿತು. ತಿಂಗಳಿಗೊಂದುಸಾರಿ ಹತ್ತು ಮಂದಿ ದರೋಡೆಗಾರರು ಆ ಊರಿಗೆ ಬಂದು ತಮ್ಮನ್ನು ಅಡ್ಡಗಟ್ಟಿದವರನ್ನು ಹೊಡೆದು, ಮನೆಗಳನ್ನು ನುಗ್ಗಿ, ಸಿಕ್ಕಿದುದನ್ನೆಲ್ಲಾ ದೋಚಿಕೊಂಡು ಹೋಗುತ್ತಿದ್ದರು.

ಚಿರಂಜೀವಿ ಈ ವಿವರಗಳನ್ನು ಕೇಳಿದ ಮೇಲೆ ಗ್ರಾಮದ ಎಲ್ಲಾ ಜನರನ್ನೂ ಒಂದು ಗೂಡಿಸಿ, "ಮನುಷ್ಯನಿಗೆ ಹೇಡಿತನಕ್ಕಿಂತ ಕೆಟ್ಟ ಶಾಪವೂ ಅವಮಾನವೂ ಬೇರೊಂದಿಲ್ಲ. ಇಷ್ಟು ಮಂದಿ ಯುವಕರು

ಈ ಗ್ರಾಮದಲ್ಲಿರುವಾಗ ಕೇವಲ ಹತ್ತು ಮಂದಿ ಕಳ್ಳರು ಹಟ್ಟಹಗಲೇ ಊರೊಳಗೆ ನುಗ್ಗಿಕೊಳ್ಳೆ ಹೊಡೆಯುವುದೆಂದರೇನು? ಅವರನ್ನು ಧೈರ್ಯ ದಿಂದ ಇದಿರಿಸಿ ಹಿಡಿದು ಕಟ್ಟಿ ರಾಜಭಟರಿಗೆ ಒಪ್ಪಿಸಿ ಬಿಡಿರಿ" ಎಂದು ಹುರುಡಿಸಿದನು.

ಚಿರಂಜೀವಿಯ ಮಾತುಗಳಿಂದ ನವಚೇತನ ಹೊಂದಿದ ಇಪ್ಪತ್ತೈದು ಮಂದಿ ಯುವಕರು ದರೋಡೆ ಕೋರರನ್ನು ಇದಿರಿಸುವ ಸಾಹಸಕ್ಕೆ ಮುಂದೆ ಬಂದರು.

ಮತ್ತೊಂದು ಹತ್ತು ದಿನಗಳ ಮೇಲೆ ದರೋಡೆ ಗಾರರು ಬಂದೇ ಬಂದರು. ಚಿರಂಜೀವಿಯ ಬೋಧನೆ ಯಂತೆ ಊರೊಳಗಿನ ಇಪ್ಪತ್ತೈದು ಮಂದಿ ಯುವ ಕರು ಅವರನ್ನು ಇದಿರಿಸಿ ಹೊಡೆದೋಡಿಸಲು ಮುಂದೆ ಬಂದರು.

ಆದರೆ ಕತ್ತಿ ಕೋಲು ತಾಲೀಮುಗಳಲ್ಲಿ ಉತ್ತೀರ್ಣ ರಾದ ಆ ಕಳ್ಳರಗುಂಪು ಕೆಲವೇ ನಿಮಿಷಗಳಲ್ಲಿ ಆ ಯುವಕರನ್ನು ಸೋಲಿಸಿ, "ಇಷ್ಟುಕಾಲ ನಮ್ಮನ್ನು ಇದಿರಿಸಲು ಇಲ್ಲದಿದ್ದ ಸಾಹಸ ಈಗ ನಿಮಗೆ ಹೇಗೆ ಬಂತು? ಯಾವನೋ ದುಷ್ಟ ನಿಮ್ಮನ್ನೆಲ್ಲ ಹೀಗೆ ಮಾಡಲು ಕೆರಳಿಸಬೇಕು. ಅವನು ಯಾರೆಂದು ಹೇಳಿದರೆ ನಿಮ್ಮನ್ನು ಏನೂ ಮಾಡದೆ ಬಿಟ್ಟು ಬಿಡುತ್ತೇವೆ" ಎಂದರು.

ಯುವಕರು ಹೇಳಲಾಗದೆ ಹಿಂದೆ ಮುಂದೆ ನೋಡಿದರು. ಆಗ ಚಿರಂಜೀವಿ ಧೈರ್ಯದಿಂದ ಕಳ್ಳರ ಮುಂದೆ ಬಂದು. "ಅದು ನಾನೇ. ಏಕೆಂದರೆ ನೀವು ಮಾಡುವುದು ತುಂಬಾ ಅನ್ಯಾಯ. ಅದನ್ನು ಇದಿರಿಸಲೇಬೇಕೆಂದು ನಾನೇ ಈ ಯುವಕರನ್ನು ಪ್ರೋತ್ಸಾಹ ಪಡಿಸಿದೆ" ಎಂದನು.

ಕಳ್ಳರು ಕೂಡಲೇ ಚಿರಂಜೀವಿಯನ್ನು ಹಿಡಿದು ಬೋದತಪ್ಪಿ ಹೋಗುವ ಹಾಗೆ ಹೊಡೆದು ಹಾಕಿ "ಈಸಾರಿ ಇಷ್ಟಕ್ಕೆ ಬಿಡುತ್ತೇವೆ. ಇನ್ನೊಂದು ಸಾರಿ ನಮ್ಮನ್ನು ಇದಿರಿಸಿದರೆ ಈ ಊರಿಗೇ ಬೆಂಕಿ ಹಚ್ಚಿ ಹೋಗುತ್ತೇವೆ, ಜಾಗ್ರತೆ!" ಎಂದು ಊರವರನ್ನು ಹೆದರಿಸಿ, ಎಲ್ಲರ ಮನೆಯನ್ನೂ ಧಾರಾಳವಾಗಿ ದೋಚಿಕೊಂಡು ಹೊರಟು ಹೋದರು.



ಚಿರಂಜೀವಿ ಗಾಯಗಳಿಂದ ನರಳಿಕೊಂಡಿದ್ದನು. ಆ ಊರಿನಲ್ಲಿ ವೈದ್ಯನೆಂಬವನೇ ಇರಲಿಲ್ಲ. ಕೆಲವರು ಅವನನ್ನು ದೂರದ ಗ್ರಾಮಕ್ಕೆ ತೆಗೆದುಕೊಂಡು ಹೋಗಿ ಅಲ್ಲಿದ್ದ ವೈದ್ಯನಿಂದ ಚಿಕಿತ್ಸೆ ಮಾಡಿಸಿದರು. ಒಂದು ದಿನವಿಡೀ ಬೋದವಿಲ್ಲದೆ ಬಿದ್ದಿದ್ದ ಚಿರಂಜೀವಿ ಪ್ರಾಣಾಪಾಯದಿಂದ ಹೊರಬಿದ್ದು ಗುಣಮುಖನಾಗತೊಡಗಿದ.

ಅವನು ಮತ್ತೆ ತಮ್ಮ ಊರಿಗೆ ಬಂದರೆ ಅಪಾಯವೆಂದುಕೊಂಡು, ಅವನನ್ನು ತಂದವರು ಅವನಿಗೆ ಎಚ್ಚರ ಬರುವುದರೊಳಗೆ ತಮ್ಮ ಗ್ರಾಮಕ್ಕೆ ಹೊರಟುಹೋಗಿಬಿಟ್ಟಿದ್ದರು.

ಹತ್ತು ದಿನಗಳ ಮೇಲೆ ಚಿರಂಜೀವಿ ಪೂರ್ತಿ ಗುಣಮುಖನಾಗಿ, ಆ ಗ್ರಾಮದ ಒಬ್ಬನನ್ನು ಕರೆದುಕೊಂಡು ಮೊದಲಿದ್ದ ಗ್ರಾಮಕ್ಕೆ ಬಂದುಬಿಟ್ಟನು. ಅವನು ಮತ್ತೆ ಬಂದುದರಿಂದ ಗ್ರಾಮದ ಜನರಿಗೆ ಸ್ವಲ್ಪವೂ ಹಿಡಿಸಲಿಲ್ಲ.

ಚಿರಂಜೀವಿ ಊರೊಳಗಿನ ಹಿರಿಯರು ಕೆಲವರನ್ನು ನೋಡಿ, "ಈ ಊರಿನಲ್ಲಿ ವೈದ್ಯರಿಲ್ಲದಿದ್ದುದರಿಂದ ತಾನೇ ನೀವು ನನ್ನನ್ನು ಬೇರೆ ಊರಿಗೆ ತೆಗೆದುಕೊಂಡು ಹೋಗಬೇಕಾಗಿ ಬಂತು? ಪ್ರತಿ ಗ್ರಾಮಕ್ಕೂ ಕಡೇಪಕ್ಷ ಒಬ್ಬ ವೈದ್ಯನಾದರೂ ಇರಬೇಕು. ಆದಕ್ಕೇ ನಾನು ಈ ವೈದ್ಯನನ್ನು ಕರೆದುಕೊಂಡು ಬಂದೆ. ಇವನು ವೈದ್ಯಕೀಯದಲ್ಲಿ ತುಂಬ ಗಟ್ಟಿಗ. ಈ ಗ್ರಾಮದಲ್ಲೇ ಸ್ಥಿರವಾಗಿರಲು ನಾನು ಒಪ್ಪಿಸಿದ್ದೇನೆ" ಎಂದನು.

ಚಿರಂಜೀವಿಯ ಮಾತು ಕೇಳಿ ಊರಹಿರಿಯರು ದಂಗಾಗಿ ಹೋದರು. ನಿಜ ನೋಡಿದರೆ ಎಲ್ಲರಿಗಿಂತ ಹೆಚ್ಚಾಗಿ ಚಿರಂಜೀವಿಗೇ ಕಳ್ಳರಿಂದ ಪ್ರಾಣಭಯ. ತಾವೆಲ್ಲಾ ಹೆದರಿಕೊಂಡೇ ಇರುವಾಗ ಚಿರಂಜೀವಿ ತನ್ನ ಪ್ರಾಣವನ್ನು ಲಕ್ಷ್ಯಮಾಡದೆ ಗ್ರಾಮದ ಕ್ಷೇಮವನ್ನೇ ಮುಖ್ಯವಾಗಿಟ್ಟುಕೊಂಡು ವೈದ್ಯನನ್ನು ಕರೆದು ತಂದಿದ್ದಾನೆ!

ಇದರಿಂದಾಗಿ ಚಿರಂಜೀವಿಯ ಮೇಲೆ ಗ್ರಾಮದೊಳಗಿನ ಎಲ್ಲರಿಗೂ ಅಪಾರವಾದ ಗೌರವ ಉಂಟಾಯಿತು. ಎಲ್ಲರೂ ಕಳ್ಳರನ್ನು ಇದಿರಿಸಲು ಸೊಂಟ ಕಟ್ಟಿ ನಿಂತರು. ಮತ್ತೊಂದು ಸಾರಿ ದರೋಡೆಕೋರರು ಬಂದಾಗ, ನೂರರ ಸಂಖ್ಯೆಯಲ್ಲಿ ಗ್ರಾಮದವರು ಕೂಡಿ ಅವರನ್ನೆಲ್ಲ ಇದಿರಿಸಿ, ಓಡಲು ಬಿಡದೆ ಹಿಡಿದು ಕಟ್ಟಿ ಎಳೆದುಕೊಂಡು ಹೋಗಿ ರಾಜಾಧಿಕಾರಿಗಳಿಗೆ ಒಪ್ಪಿಸಿದರು.

ಈ ರೀತಿಯಾಗಿ ತನ್ನಿಂದ ಆ ಊರಿಗೆ ಆಗ ತಕ್ಕ ಉಪಕಾರವೇ ಆಯಿತೆಂದು ಭಾವಿಸಿ ಚಿರಂಜೀವಿ ಆ ಊರಿನವರಿಂದ ಅಪ್ಪಣೆ ಪಡೆದುಕೊಂಡು ಹೊರಟುಹೋದನು.



# ಲೋಭಿ

ಒಂದು ಗ್ರಾಮದಲ್ಲಿ ಇಬ್ಬರು ವರ್ತಕರಿದ್ದರು. ಅವರಲ್ಲಿ ಒಬ್ಬನು ಪರಮಲೋಭಿ, ಎರಡನೆಯವನು ಮಹಾ ದಾತನೆಂದು ಹೆಸರಾಗಿದ್ದನು. ಅವನ ಸಂಪಾದನೆಯಲ್ಲಿ ಹೆಚ್ಚಿನ ಭಾಗವು ದಾನಧರ್ಮಗಳಿಗೇ ಖರ್ಚಾಗುತ್ತಿತ್ತು. ಅವನಿಗೆ ಒಳ್ಳೆಯ ಹೆಸರು ಬರುವುದನ್ನು ನೋಡಿ ಮೊದಲನೆಯ ವರ್ತಕನಿಗೆ ಹೊಟ್ಟೇಕಿಚ್ಚು ಏಳುತ್ತಿದ್ದಿತು. ಅವನನ್ನು ಅವಮಾನಪಡಿಸಬೇಕೆಂದು ಸಮಯ ಕಾಯುತ್ತಿದ್ದನು.

ಒಂದು ದಿನ ದಾತನಾದ ವರ್ತಕನು ಗ್ರಾಮದ ಕಟ್ಟೆಯಲ್ಲಿ ಕುಳಿತುಕೊಂಡು ಗ್ರಾಮಸ್ಥರೊಂದಿಗೆ ಏನೋ ಹೇಳಿಕೊಂಡಿದ್ದನು. ಗ್ರಾಮಸ್ಥರು ಅವನು ಹೇಳುವುದನ್ನು ಆಸ್ಥೆಯಿಂದ ಕೇಳುತ್ತಿದ್ದರು. ಆಗ ಲೋಭಿ ವರ್ತಕನು ಆ ದಾರಿಯಾಗಿ ಬಂದು, ಅಲ್ಲಿಯ ದೃಶ್ಯವನ್ನು ನೋಡಿ ಸಹಿಸಲಾರದೆ, "ಏನಯ್ಯಾ ಇದು ? ಎಲ್ಲರ ಮುಂದೆ ಭಲೇ ಜಂಬ ಕೊಚ್ಚುವಿರಲ್ಲಾ ? " ಎಂದನು.

"ಆದು ಮತ್ತೇನಿಲ್ಲ. ನೀವು ಎಷ್ಟು ದೊಡ್ಡ ಧರ್ಮಬುದ್ಧಿಯವರೆಂದೂ, ದಾತೃತ್ವ ನಿಮ್ಮಲ್ಲಿ ಹೇಗೆ ಮೂರ್ತೀಭವಿಸಿದೆಯೆಂದೂ ಹೇಳುತ್ತಿದ್ದೆ" ಎಂದನು ದಾನಬುದ್ಧಿಯ ವರ್ತಕ.

ಲೋಭಿಯ ಮುಖ ಕಪ್ಪಿಟ್ಟಿತು.



## ಫೋಟೋ ಶೀರ್ಷಿಕೆಯ ಸ್ಪರ್ಧೆ :: ಬಹುಮಾನ ರೂ. ೨೫
### ಗೆದ್ದ ಶೀರ್ಷಿಕೆಗಳು ೧೯೭೯ ಜನವರಿ ಸಂಚಿಕೆಯಲ್ಲಿ ಪ್ರಕಟವಾಗುತ್ತವೆ





M. Natarajan  Bishan Maheshwari

- ★ ಮೇಲಿನ ಫೋಟೋಗಳಿಗೆ ಸರಿಹೊಂದುವಂತೆ ಒಂದು ವಾಕ್ಯದಲ್ಲಾಗಲೀ, ಸಂಬಂಧಿಸಿದಂತಿರುವ ಎರಡು ವಾಕ್ಯಗಳಲ್ಲಾಗಲೀ ಶೀರ್ಷಿಕೆ ಬರೆಯಬೇಕು.
- ★ ನವಂಬರ್ ೧೫ ರೊಳಗೆ ಶೀರ್ಷಿಕೆಗಳು ನಮಗೆ ತಲಪಬೇಕು. ಆಮೇಲೆ ಬಂದ ಶೀರ್ಷಿಕೆಗಳು ಪರಿಶೀಲಿಸಲ್ಪಡುವುದಿಲ್ಲ.
- ★ ನಮಗೆ ಬಂದ ಶೀರ್ಷಿಕೆಗಳಲ್ಲಿ ಅತ್ಯುತ್ತಮವಾದ ಒಂದು ಜತೆಗೆ ರೂಪಾಯಿ ೨೫ ಬಹುಮಾನ.
- ★ ಶೀರ್ಷಿಕೆಗಳನ್ನು ಪೋಸ್ಟುಕಾರ್ಡಿನಲ್ಲೇ ಬರೆಯಬೇಕು. ಅದರಲ್ಲಿ ಬೇರೆ ವಿಷಯ ಬರೆಯಬಾರದು. ವಿಳಾಸ: ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದರಾಸು - ೬೦೦೦೨೬

---

### ಸೆಪ್ಟೆಂಬರ್ ಸ್ಪರ್ಧೆಯ ಫಲಿತಾಂಶ:

ಮೊದಲನೇ ಫೋಟೋ: ವಿದ್ಯೆಗೆ ವಿರಾಮ

ಎರಡನೇ ಫೋಟೋ: ಬುದ್ಧಿಗೆ ಕಸರತ್ತು

ಕಳುಹಿಸಿದವರು: ಎಂ. ಆರ್. ಹನುಮಂತರಾವ್,

ನಂ. ೩, ಫಿಲ್ಟರ್‌ಬೆಡ್ ರೋಡ್, ಚಿಂತಾಮಣಿ, ಕೋಲಾರ ಜಿಲ್ಲೆ

Printed by B. V. REDDI at Prasad Process Private Ltd., and Published by B. VISWANATHA REDDI for CHANDAMAMA CHILDREN'S TRUST FUND (Prop. of Chandamama Publications) 2 & 3, Arcot Road, Madras-600 026 (India). Controlling Editor : NAGI REDDI.

# ಆನಂದ ದ್ವೀಪ

ಕ್ಯಾಡ್‌ಬರೀಸ್




ಚಾಕ್‌ಲೇಟ್ ಉಳ್ಳ ಬಣ್ಣ ಬಣ್ಣದ ಕ್ಯಾಡ್‌ಬರೀಸ್ ಜೆಮ್ಸ್

CHAITRA-C-105 KAN

# ಅತಿ ಸ್ವಲ್ಪ ಖರ್ಚಿನಲ್ಲಿ ಅತ್ಯಧಿಕ ಬಟ್ಟೆಗಳನ್ನು ಒಗೆಯಿರಿ.




ತಯಾರಕರು: ಶ್ರೀ ರಾಮಕೃಷ್ಣ ಆಯಿಲ್ ಮಿಲ್ಸ್
ಮಂಗಳೂರು.

WOODY-SROM-KAN-784 D



# ಕರಡಿಕೆಂಗಣ್ಣ

## ೪

[ ಜಲಪಾತದಾಚೆಯಿಂದ ಬಂದ ಕರಡಿಕೆಂಗಣ್ಣ ಮಾಂತ್ರಿಕನು ಕಾಳೀವರ್ಮನ ಸಾಹಸವನ್ನು ಮೆಚ್ಚಿಕೊಂಡನು. ಆ ಸಮಯದಲ್ಲಿ ಆ ಶಿರೀಷವನಕ್ಕೆ ಜಿತಕೇತುರಾಜನ ಮಂತ್ರಿ ಬಂದನು. ಕರಡಿಕೆಂಗಣ್ಣನ ಕರಾಮತಿಯನ್ನು ನೋಡಿ ಮಂತ್ರಿ ಹೆದರಿ ಅವನು ಹೇಳಿದಂತೆ ಕೇಳುವವನಾದನು, ಅವನನ್ನು ಕೋಣದ ಮೇಲೇರಿಸಿ ಕರಡಿಕೆಂಗಣ್ಣನು ಎಲ್ಲರನ್ನೂ ನಗರಕ್ಕೆ ಹೊರಡಿಸಲು, ಕಾಳೀವರ್ಮನು ಕೋಪದಿಂದ ಕರಡಿಕೆಂಗಣ್ಣನ ಮೇಲೆ ಕತ್ತಿ ಹಿರಿದನು.]

**ಕಾ**ಳೀವರ್ಮನ ಧೈರ್ಯವನ್ನೂ, ಅದಕ್ಕೆ ತಕ್ಕಂತೆ ತನ್ನಂತಹವನನ್ನು ಲಕ್ಷ್ಯಮಾಡದೆ ಕತ್ತಿ ಹಿರಿದ ಸಾಹಸವನ್ನೂ ನೋಡಿ ಕರಡಿಕೆಂಗಣ್ಣ ಮಾಂತ್ರಿಕನು ತುಂಬಾ ಬೆರಗಾಗಿ, ಅಲ್ಲಿದ್ದ ಎಲ್ಲರಲ್ಲಿ ಏನು ಪ್ರತಿಕ್ರಿಯೆ ಮೂಡುವುದೋ ಎಂದು ನೋಡಿದನು. ಮಂತ್ರಿ ಜೀವಗುಪ್ತನ ಹೊರತು ಉಳಿದೆಲ್ಲರೂ ಇನ್ನಿಷ್ಟು ಭಯಕಂಪಿತರಾಗಿ ನಡುಗುತ್ತಿದ್ದರು. ಜೀವಗುಪ್ತನು ಏನನ್ನೋ ನಿರ್ಧರಿಸಿದವನಂತೆ, ತಾನು ಕುಳಿತಿದ್ದ ಕೋಣವನ್ನು ಕಾಳೀವರ್ಮನ ಕಡೆಗೆ ಹೊರಡಿಸಿದನು. ಆಗ ಕರಡಿಕೆಂಗಣ್ಣನು ಅವನನು ತಡೆದು,

"ಏನಯ್ಯಾ, ಮಹಾಮಂತ್ರಿ! ಈಗ ನೀನು ಯಾವ ಕೆಲಸ ಮಾಡಲು ಚಲಿಸುತ್ತಿದ್ದೀ? ಕಾಳೀವರ್ಮನು ನನ್ನ ಮೇಲೆ ರೇಗಿಬೀಳುವಂತೆ ಮಾಡಲು ಪ್ರಾರಂಭಿಸಿದಿಯೇನು? ನಿಜತಾನೇ?" ಎಂದು ಕೇಳಿದನು.

ಆ ಪ್ರಶ್ನೆ ಕೇಳಿ ಜೀವಗುಪ್ತನ ಬಾಯಿಯ ಪಸೆ ಆರಿದಂತಾಗಿ, ನಾಲಗೆಯಿಂದ ತುಟಿ ಸವರಿಕೊಂಡು, "ಅಯ್ಯಾ, ಮಹಾಮಾಂತ್ರಿಕರೇ, ನೀವು ನನ್ನನ್ನು ಅಪಾರ್ಥ ಮಾಡಿಕೊಳ್ಳಬಾರದು. ತಮ್ಮಂತಹ ಮಹಾಮಾಂತ್ರಿಕರ ಆಜ್ಞೆಯನ್ನು ಶಿರಸಾವಹಿಸುವುದೇ ಒಳ್ಳೆಯದೆಂದು ನಾನು ಈ ಯುವಕನಿಗೆ



ಹೇಳಬೇಕೆಂದು ನೋಡಿದೆ, ಅಷ್ಟೇ" ಎಂದನು.

"ಓಹೋ !" ಎಂದು ಕರಡಿಕೆಂಗಣ್ಣನು ಅವನನ್ನು ನೋಡಿ ಕಿರುನಗೆಯೊಂದಿಗೆ ತಲೆಯಾಡಿಸುತ್ತ, "ನಿನ್ನ ಈ ಯುವಕ ಕಾಳೀವರ್ಮನು ಬೇಗದಲ್ಲೇ ನಿಮಗೆಲ್ಲರಿಗೂ ಆಜ್ಞೆ ಮಾಡುವವನಾಗುತ್ತಾನೆ. ಎಚ್ಚರವಿರಲಿ !" ಎಂದು ಹೇಳಿ, ಇನ್ನೂ ಹಿಡಿದ ಕತ್ತಿಯನ್ನು ಬಿಡದೆ ತನ್ನನ್ನು ಕೋಪದಿಂದ ನೋಡುವ ಕಾಳೀವರ್ಮನೊಂದಿಗೆ, "ಕಾಳೀವರ್ಮಾ, ನಿನ್ನ ಶೌರ್ಯಪರಾಕ್ರಮಗಳು ಎಷ್ಟೆಂಬುದೆಲ್ಲಾ ನಾನು ಅಳೆದುಕೊಂಡಾಯಿತು. ಅವಸರಪಡಬೇಡ. ನಿನಗೆ ಇದೆಲ್ಲ ಬೇಕಾದಷ್ಟಿದ್ದರೂ ಪಾಪ, ಜೀವನಾನುಭವ ಏನೂ ಸಾಲದು. ಈಗಿನ ಪರಿಸ್ಥಿತಿಯಲ್ಲಿ ನಿನ್ನ ದಾರಿ ಹಿಡಿದು ನೀನೂ, ನನ್ನ ದಾರಿಹಿಡಿದು ನಾನೂ ಹೊರಟುಹೋದೆವೆಂದುಕೋ. ಆಮೇಲೆ ಏನು ನಡೆಯುವುದೆಂಬುದನ್ನು ಆಲೋಚನೆ ಮಾಡಿರುವೆಯಾ ?" ಎಂದು ಕೇಳಿದನು.

"ಅದನ್ನು ಕುರಿತು ಅಷ್ಟೇನೂ ಆಲೋಚನೆ ಮಾಡುವ ಅಗತ್ಯವೇನಿಲ್ಲ. ನೀನು ಮತ್ತೆ ಆ ಜಲಪಾತದ ಹಿಂದಿರುವ ಗುಹೆಯೊಳಗೆ ಹೋಗುವಿ. ನಾನು ನನ್ನ ಹಳ್ಳಿಯನ್ನು ಸೇರಿ ಹಾಯಾಗಿ ವ್ಯವಸಾಯ ಮಾಡುತ್ತ ಪ್ರಶಾಂತವಾಗಿ ಜೀವನ ನಡೆಸುತ್ತೇನೆ. ಇದೇನು ದೊಡ್ಡ ಮಾತು ಅಂತ ಕೇಳುವೆಯೋ ?" ಎಂದನು ಕಾಳೀವರ್ಮ.

"ಹೇಳಿದೆನಲ್ಲಪ್ಪಾ, ನೀನು ಎಷ್ಟು ದೊಡ್ಡ ಧೈರ್ಯಶಾಲಿಯೋ ಅಷ್ಟೇ ಮುಗ್ಧಭಾವನೆಯುವನೆಂದು ಈ ನಿನ್ನ ಮಾತಿನಿಂದಲೇ ಗೊತ್ತಾಯಿತು ಬಿಡು" ಎಂದು ಕರಡಿಕೆಂಗಣ್ಣನು ಜೀವದತ್ತನನ್ನು ನೋಡಿ, "ಎಲೋ ಮಹಾಮಂತ್ರೀ, ಈ ಕಾಳೀವರ್ಮನು ತನ್ನ ಗ್ರಾಮಕ್ಕೆ ಹೋಗಿ ಸೇರಿದ ಮೇಲೆ ಅವನನ್ನು ಹಿಡಿದು ತರಲು ಎಷ್ಟು ಮಂದಿ ಸೈನಿಕರನ್ನು ಕಳುಹಿಸಲಿರುವಿಯೋ ಮುಚ್ಚುಮರೆ ಮಾಡದೆ ಹೇಳು. ನಿನ್ನ ಮನಸ್ಸಿನಲ್ಲಿ ಏನು ಆಲೋಚನೆ ನಡೆಯುವುದೆಂದು ನನಗೆ ಗೊತ್ತಿದೆ. ರಾಜನ ಹತ್ತಿರ ಹೇಳಿ ಆರಿಸಿದ ವೀರರಾಗಿ ಎಷ್ಟು ಮಂದಿಯನ್ನು ಕಳುಹಿಸಲಿರುವಿಯೆಂದು ನಿನ್ನ ಬಾಯಿಯಿಂದಲೇ ಹೊರಗೆ ಬರಲಿ ! ಸುಳ್ಳುಪೊಳ್ಳು ಹೇಳಿದರೆ ಸುಟ್ಟುಹೋದ ಮರದ ಹಾಗೆ ನಿಂತಲ್ಲೇ ನಿನ್ನನ್ನು ಭಸ್ಮಮಾಡಿ ಬಿಡುತ್ತೇನೆ" ಎನ್ನುತ್ತ ತನ್ನ ಕರಡಿತಲೆಯ ದಂಡವನ್ನು ಮೇಲಕ್ಕೆತ್ತಿದನು.

ಜೀವಗುಪ್ತನು ಮಹಾಭೀತಿಯಿಂದ, "ಬೇಡ ಬೇಡ. ಹೇಳುತ್ತೇನೆ. ನನ್ನ ಆಲೋಚನೆಯನ್ನೆಲ್ಲಾ ತಾವು ತಿಳಿದುಬಿಟ್ಟಿದ್ದೀರಾದ್ದರಿಂದ ನಾನು ಅಡಗಿಸಿಟ್ಟು ಪ್ರಯೋಜನವೂ ಇಲ್ಲ. ಅಯ್ಯಾ, ಮಾಂತ್ರಿಕೋತ್ತಮ ಮಹಾಮುನಿಗಳೇ, ನಾನು ಜಿತಕೇತು ರಾಜನ ಉಪ್ಪು ತಿಂದುಕೊಂಡಿರುವವನಾದುದರಿಂದ ಈ ಕಾಳೀವರ್ಮನನ್ನು ಹತಮಾಡಲು ಅವರಿಗೆ ತಕ್ಕ ಆಲೋಚನೆ ಹೇಳಬೇಕಾದುದೇ ನ್ಯಾಯ

ವಲ್ಲವೇ ? ಅವರ ಕ್ಷೇಮಕ್ಕಾಗಿ ತಕ್ಕ ಆಲೋಚನೆ ನಾನು ಹೇಳಬೇಕಾದುದು ತಪ್ಪಾಗಲಾರದಷ್ಟೇ ? ಮಂತ್ರಿಯಾದುದರಿಂದ ಅದು ನನ್ನ ಧರ್ಮವೂ ಆಗುತ್ತದೆಂದು ತಾವು ಗ್ರಹಿಸುವಿರೆಂದೇ ನಂಬು ತ್ತೇನೆ " ಎಂದನು.

ಕರಡಿಕೆಂಗಣ್ಣನು ಮಂತ್ರದಂಡವನ್ನು ಗಟ್ಟಿಯಾಗಿ ನೆಲಕ್ಕೆ ತಾಗಿಸಿ, "ಕೇಳಿದೆಯಾ ಕಾಳೀವರ್ಮಾ ? ಈಗ ನಿನಗೆ ಈ ಚಂದ್ರಶಿಲಾನಗರದಲ್ಲೇ ಭದ್ರತೆ ಇಲ್ಲ ವೆಂದು ಗೊತ್ತಾಯಿತಷ್ಟೆ ? ಅಂದ ಮೇಲೆ ಗ್ರಾಮ ದಲ್ಲಿ ಹಾಯಾಗಿ ಬದುಕಿರಬೇಕೆಂಬ ನಿನ ಯೋಚನೆ ಎಂಥ ಹೆಡ್ಡುತನ ತಿಳಿಯಿತಷ್ಟೆ ?" ಎಂದನು.

ಈಗ ಕಾಳೀವರ್ಮನಿಗೆ ತನ್ನ ವಿಷಮ ಪರಿಸ್ಥಿತಿ ಅರ್ಥವಾಯಿತು. ಅಷ್ಟೊಂದು ದೊಡ್ಡ ಸೈನ್ಯಬಲ ವಿರುವ ಜಿತಕೇತು ರಾಜನನ್ನು ತಾನೊಬ್ಬನಾಗಿ, ಅಥವಾ ಕೆಲವಾರು ಮಂದಿ ಅನುಚರರ ಸಹಾಯ ದಿಂದ ಇದಿರಿಸಿ ನಿಲ್ಲುವುದು ಅಸಾಧ್ಯವೇ. ಜಿತಕೇತು ರಾಜನ ಸಿಂಹಾಸನವನ್ನು ತಾನು ಆಕ್ರಮಿಸುವುದೋ, ಅದಾಗದಿದ್ದರೆ ದೇಶಬಿಟ್ಟು ಹೋಗುವುದೋ, ಈ ಎರಡರಲ್ಲಿ ಒಂದು ತನ್ನ ಮುಂದಿರುವ ದಾರಿ...

ಕಾಳೀವರ್ಮನು ಹೀಗೆ ಆಲೋಚಿಸುತ್ತ, ತನ್ನ ಕತ್ತಿಯನ್ನು ಒರೆಯೊಳಗೆ ಸೇರಿಸಿ, ಕರಡಿಕೆಂಗಣ್ಣ ನನ್ನು ನೋಡಿ, "ಗುರೂ ! ತಾವು ಬಹಳ ದೊಡ್ಡ ವರು. ನೀವು ಹೇಳಿದ್ದು ನಿಜವೇ. ನನ್ನ ಕ್ಷೇಮದ ಸಂಗತಿ ನನಗಿಂತಲೂ ನನ್ನನ್ನು ಬೆಳೆಯಿಸಿ ದೊಡ್ಡವ ನನ್ನಾಗಿ ಮಾಡಿದ ಬಲಭದ್ರನಿಗೂ ನಿಮಗೂ ಹೆಚ್ಚಿಗೇ ತಿಳಿದ ಹಾಗಿದೆ. ಈಗ ತಮ್ಮ ಆಜ್ಞೆ ಏನು ? ಹೇಳಬೇಕು " ಎಂದನು.

ಕರಡಿಕೆಂಗಣ್ಣನು ತನ್ನ ಮಂತ್ರದಂಡದಿಂದ ಕಾಳೀ ವರ್ಮನ ಭುಜವನ್ನು ತಟ್ಟಿ, "ಕಾಳೀವರ್ಮ, ನಿನ್ನ ಅದೃಷ್ಟದೇವತೆಯೇ ನಿನ್ನನ್ನು ಪ್ರೋತ್ಸಾಹಿಸಿ ನನ್ನನ್ನು ಗುರುವೆಂದು ಸಂಬೋಧಿಸಲು ಹೇಳಿದೆ. ಒಳ್ಳೇ



ದಪ್ಪ. ನಿನಗೆ ನಾನು ಮಾಡುವುದು ಆಜ್ಞೆಯಲ್ಲ, ಸಲಹೆಗಳು. ಈಗ ನಾವೆಲ್ಲರೂ ನಗರಕ್ಕೆ ಹೋಗು ತ್ತಿದ್ದೇವೆ. ಆ ಜಿತಕೇತು ರಾಜನ ದರ್ಪವು ಎಷ್ಟರ ಮಟ್ಟಿನದೆಂದು ನೋಡಬೇಕು. ಎಲೋ ಮಂತ್ರಿ ಜೀವಗುಪ್ತಾ, ನಾನು ಆ ಕೋಣದ ಮೇಲೆ ಏರಿ ಕೊಳ್ಳುತ್ತೇನೆ. ನೀನು ಅದರ ಮೂಗುದಾರ ಹಿಡಿದು ಕೊಂಡು ನಗರದ ಕಡೆಗೆ ಕರೆದುಕೊಂಡು ಹೋಗು " ಎಂದನು. ಮಂತ್ರಿ ಜೀವಗುಪ್ತನು ಮರುಮಾತಾಡದೆ ಕೋಣದ ಮೇಲಿನಿಂದ ಇಳಿದು ಅದರ ಮೂಗು ದಾರ ಹಿಡಿದುಕೊಂಡನು. ಕರಡಿಕೆಂಗಣ್ಣನು ಆ ಕೋಣದ ಮೇಲೆ ಏರಿ ಕುಳಿತನು.

"ಈ ಕೋಣವು ಬಹಳ ಕಾಲದ ಹಿಂದೆ, ದಾರಿ ತಪ್ಪಿ ಈ ಲೋಕದಲ್ಲಿದ್ದ ಒಬ್ಬ ಯಮಕಿಂಕರನ ವಾಹನವಾಗಿತ್ತು. ಈ ಮಾತನ್ನು ನಂಬದಿರುವವರು ನಿಮ್ಮಲ್ಲಿ ಯಾರಾದರೂ ಇರುವರೇನು ?" ಎಂದು ಎಲ್ಲರನ್ನೂ ನೋಡಿದನು ಕರಡಿಕೆಂಗಣ್ಣ.



ಸ್ವಲ್ಪ ದೂರ ಪ್ರಯಾಣ ಮಾಡು" ಎಂದನು. ಆ ಕೂಡಲೇ ಕೋಣದ ಮೂಗಿನ ಹೊಳ್ಳೆಗಳಿಂದ ಭುಸ್ಸೆಂಬ ತುಫಾನಿನಂತಹ ಶ್ವಾಸಹಾಯ್ದು ಹೊರ ಬಂದಿತು. ತಲೆಯನ್ನು ಮೇಲೆತ್ತಿ ಕರ್ಣಕಠೋರ ವಾಗಿ ಠೇಂಕರಿಸಿ ನೆಲದಿಂದ ಅವಲೀಲೆಯಾಗಿ ಆಕಾಶಕ್ಕೆದ್ದು ಗಾಳಿಯಲ್ಲಿ ತೇಲುತ್ತಾ ನಗರಕ್ಕೆ ಹೊರಟಿತು. ಅದು ಹಾಗೆ ಮೇಲಕ್ಕೆ ಹಾರಿದಾಗ, ಅದರ ಮೂಗುದಾರ ಹಿಡಿದಿದ್ದ ಜೀವದತ್ತನು ದಾರ ವನ್ನು ಜಾರಬಿಟ್ಟು ಮೇಲೆ ನೋಡುತ್ತ, ಬೀಳುತ್ತ ಏಳುತ್ತ ಓಡತೊಡಗಿದನು.

ಕರಡಿಕೆಂಗಣ್ಣನು ಸ್ವಲ್ಪದೂರ ಹೋಗಿ ಕೋಣ ವನ್ನು ನೆಲಕ್ಕಿಳಿಸಿದನು. ಜೀವಗುಪ್ತನು ಮತ್ತೆ ಅದರ ಮೂಗುದಾರ ಹಿಡಿದನು. ಕರಡಿಕೆಂಗಣ್ಣನು ಹಿಂದೆ ಬರುವವರನ್ನು ನೋಡಿ "ಎಂತಹ ಮಹಾಮಂತ್ರಿಗೆ ಏನು ಗತಿ ಬಂತು ನೋಡಿದಿರಾ? ಇವನ ಮೇಲಿ ನವನಾದ ಆ ಜಿತಕೇತು ರಾಜನನ್ನು ಸಹಾ ಹಿಡಿದು ತಕ್ಕ ರೀತಿಯಲ್ಲಿ ಶಿಕ್ಷೆ ಕೊಡದೆ ಬಿಡಲಾರೆ. ಜೈ, ಆದಿಭಲ್ಲೂಕಾ!" ಎಂದನು.

ಅದುವರೆಗೂ ನಡೆಯುವುದನ್ನು ನೋಡುತ್ತ ಮೌನವಾಗಿದ್ದ ಕಾಳೀವರ್ಮನು, ಕರಡಿಕೆಂಗಣ್ಣನ ಸಮೀಪಕ್ಕೆ ಹೋಗಿ, "ಅಯ್ಯಾ, ನಿಮ್ಮನ್ನು ನಾನು ಗುರುವನ್ನಾಗಿ ಭಾವಿಸುವೆನೆಂದು ಹೇಳಿಯಾಯಿತು. ಹಾಗೆಂದ ಮಾತ್ರಕ್ಕೆ ನನಗೆ ಇಷ್ಟವಿಲ್ಲದ ಆಜ್ಞೆಗಳನ್ನು ನೀವು ಮಾಡಿದರೆ ನಾನು ತಲೆ ಬಗ್ಗಿಸುವೆನೆಂದು ತಿಳಿಯಬಾರದು. ನೀವು ನಿಜವಾಗಿಯೂ ದುಷ್ಟ ರಾಜನನ್ನು ಶಿಕ್ಷಿಸುವಿರೇನು?" ಎಂದು ಕೇಳಿದನು.

"ಕಾಳೀವರ್ಮಾ, ನಾವು ಗುರು ಶಿಷ್ಯರೆಂದುಕೊಂಡ ಮೇಲೆ, ಗುರುವು ಶಿಷ್ಯನಿಗೆ ಒಳಿತಾಗುವಂತಹ ಆಜ್ಞೆ ಗಳನ್ನೇ ಮಾಡುತ್ತಾನೆ, ಅದಿರಲಿಬಿಡು. ನಿನಗೆ ಜಿತಕೇತು ರಾಜನ ಸಿಂಹಾಸನವನ್ನು ಆಕ್ರಮಿಸ ಬೇಕೆಂದು ಆಶೆಯಿದೆಯೇ? ಇದ್ದರೂ ತಪ್ಪೆಂದು

ಯಾರೂ ಅವನ ಮಾತನ್ನು ಅಲ್ಲವೆಂಬ ಗೋಜಿಗೆ ಹೋಗಲಿಲ್ಲ. ಕಟುಕರವನು ಮಾತ್ರ ಆಶ್ಚರ್ಯ ಪಡುತ್ತ ಏನೋ ಗೊಣಗಿಕೊಂಡನು. ಅವನು ಆ ಕೋಣವನ್ನು ಚಿಕ್ಕ ಕರುವಾಗಿದ್ದಾಗ, ಒಬ್ಬ ಬಡ ರೈತನಿಂದ, ಅವನಿಗೆ ಚಿಕ್ಕಾಸು ಕೂಡಾ ಕೊಡದೆ ಎಳೆದುಕೊಂಡು ಹೋಗಿದ್ದ. ಎಂದಾದರೂ ರಾಜನು ಆ ರೈತನಿಗೆ ಶಿರಚ್ಛೇದದ ಶಿಕ್ಷೆ ವಿಧಿಸಿದರೆ ಅವನ ತಲೆಯನ್ನು ಕಡಿಯದೆ ಬಿಟ್ಟುಬಿಡುವುದಾಗಿ ಮಾತ್ರ ಅವನಿಗೆ ಮಾತು ಕೊಟ್ಟಿದ್ದ.

ಕರಡಿಕೆಂಗಣ್ಣನು ತನ್ನ ಮಂತ್ರದಂಡದ ಕರಡಿ ತಲೆಯನ್ನು ಕೋಣದ ಹಣೆಯ ಮೇಲೆ ಒಂದುಸಾರಿ ತಾಗಿಸಿ, "ಹೇ, ಕಿಂಕರಾ! ಕ್ಷುದ್ರಮಾನವನ ಕೈಗೆ ಸಿಕ್ಕಿ ಜನ್ಮದೊಂದಿಗೆ ಬಂದ ನಿನ್ನ ಅಪೂರ್ವ ಶಕ್ತಿಗಳನ್ನು ಕಳೆದುಕೊಂಡೆನೆಂದು ಸಂಶಯಪಡುವಿಯಾ? ಅದೇ ನಿಲ್ಲ. ಎಲ್ಲಿ ನೋಡೋಣ, ಭೂಮಿಯ ಮೇಲೆ ಎರಡು ಗಜ ಎತ್ತರಕ್ಕೆ ಗಾಳಿಯಲ್ಲೆದ್ದು ನಗರದ ಕಡೆಗೆ

ಕೊಳ್ಳಬೇಡ." ಎಂದು ಕೇಳಿ ಕಾಳೀವರ್ಮನ ಮುಖವನ್ನು ಪರೀಕ್ಷಿಸಿ ನೋಡಿದನು.

"ನನಗೆ ಅಂತಹ ದುರಾಶೆ ಇಲ್ಲವೇ ಇಲ್ಲ. ನಾನು ಬಯಸುವುದೇನೆಂದರೆ, ಆ ರಾಜನು ನಿರ್ದೋಷಿಗಳಿಗೆ ಶಿರಚ್ಛೇದದಂತಹ ರಾಕ್ಷಸೀ ಶಿಕ್ಷೆಗಳನ್ನು ಕೊಡಬಾರದು. ವಿಚಾರಣೆಯಿಲ್ಲದೆ 'ಮನಬಂದಂತೆ ಪರಿಪಾಲನೆ ಮಾಡಬಾರದು, ಅಷ್ಟಾದರೆ ಸಾಕಿತ್ತು" ಎಂದನು ಕಾಳೀವರ್ಮ.

"ಪ್ರಯತ್ನಿಸಿ ನೋಡುತ್ತೇನೆ, ಆದರೆ ಹುಟ್ಟುವಾಗಲೇ ಸಿಂಹಾಸನದ ವಾರಸರೆಂಬ ಅಂಟಿನಿಂದ ಕೂಡಿದ ಈ ಜಿತಕೇತುರಾಜನಂಥವರು ಸುಲಭದಲ್ಲಿ ಬದಲಾವಣೆ ಹೊಂದಲಾರರು. ಅಲ್ಲವೇನಯ್ಯಾ ಮಹಾಮಂತ್ರೀ?" ಎಂದು ಕೇಳಿದನು ಕರಡಿಕೆಂಗಣ್ಣ.

"ಆಹಾ! ರತ್ನದಂತಹ ಮಾತು ಹೇಳಿದಿರಿ ಮಹಾಮಾಂತ್ರಿಕರೇ! ಸರ್ವಜ್ಞರು ನೀವು!" ಎಂದನು ಮಂತ್ರಿ ಜೀವಗುಪ್ತ.

ಹೀಗೆ ಮಾತಾಡುತ್ತ ನಗರದ ಕಡೆಗೆ ಸ್ವಲ್ಪ ದೂರ ಹೋಗಲು, ಇಬ್ಬರು ಕುದುರೇ ಸವಾರರು ವೇಗವಾಗಿ ಅವರ ಮುಂದೆ ಬಂದರು, ಅವರು ಆ ದೇಶದ ರಾಜಭಟರಂತೆ ಕಾಣಲಿಲ್ಲ.

ಆ ಹೊಸ ಆಶ್ವಿಕರು ತಮ್ಮ ಕುದುರೆಗಳನ್ನು ದಾರಿಗೆ ಅಡ್ಡನಿಲ್ಲಿಸಿ, "ಇದೇನಿದು ನಿಮ್ಮ ರೀತಿ? ಕೋಣದ ಮೇಲೆ ಒಬ್ಬ ಸನ್ಯಾಸಿಯನ್ನು ಕೂಡಿಸಿ, ಪಟ್ಟೆ ಪೀತಾಂಬರ ಧರಿಸಿ, ರತ್ನ ಕುಂಡಲಗಳಿರುವ ದೊಡ್ಡವರು ಕೋಣದ ಮೂಗುದಾರ ಹಿಡಿದು ನಡೆಯುವುದೆಂದರೇನಿದು ಅನ್ಯಾಯವಾಗಿದೆಯಲ್ಲಾ! ಆ ಕರ್ರಗಿನ ಬಟ್ಟೆ ಬರೆಯಿಂದ ಪಿಶಾಚಿಯಂತಿರುವವನು ಪಂಚಕಲ್ಯಾಣಿಯಂಥ ಕುದುರೇ ಮೇಲೆ ಸವಾರಿ ಮಾಡುವುದೇ? ಏನಿದೆಲ್ಲಾ? ಯಾರು ನೀವು?" ಎಂದು ಕೋಪ ದರ್ಪಗಳಿಂದ ಕೇಳಿದರು. ಕಾಳೀವರ್ಮನು ಅವರಿಗೆ ಉತ್ತರ ಕೊಡಬೇಕೆಂದು



ಮುಂದೆ ಬರಲು, ಕರಡಿಕೆಂಗಣ್ಣನು ಗಟ್ಟಿಯಾಗಿ ನಕ್ಕು, ಆ ಸವಾರರನ್ನು ನೋಡಿ, "ಓಹೋ! ನೀವು ನಮ್ಮ ಜಿತಕೇತುರಾಜನ ಭಟರಲ್ಲವೆಂದು ಗೊತ್ತಾಗುತ್ತದೆ. ಆದುದರಿಂದಲೇ ನಾವು ಯಾರೆಂದು ನಿಮಗೆ ಗೊತ್ತಾಗಲಿಲ್ಲ. ನಾವು ಯಾರೆಂಬುದು ನಮಗೂ ಗೊತ್ತಿಲ್ಲ. ಅದನ್ನು ಮರೆತು ಹೋದುದರಿಂದ ಆ ಸಂಗತಿ ತಿಳಿದುಕೊಳ್ಳಲಿಕ್ಕಾಗಿ ಅಲ್ಲಿ ಕಾಣುವ ನಗರದ ಕಡೆಗೆ ಹೋಗುತ್ತಿದ್ದೇವೆ. ಆಯಿತಷ್ಟೇ? ದಾರಿ ಬಿಡಿ!" ಎಂದನು.

"ಎಲೋ ಬೈರಾಗೀ! ನಮ್ಮೊಡನೆ ಹುಡುಗಾಟವಾಡುವಿಯಾ? ನಾವು ಯಾರು ಗೊತ್ತೇನು? ಉದಯಗಿರಿಯ ರಾಜರಾದ ದುರ್ಮುಖರ ವೀರ ಸೈನಿಕರು. ಈಗ ತಾನೇ ಇಲ್ಲಿಯ ಶಿರೀಷವನಕ್ಕೆ ಹೋಗಿ ಬರುತ್ತಿದ್ದೇವೆ. ಅಲ್ಲಿ ಕಾಳೀವರ್ಮ ಎಂಬ ದುರಳನಾಗಲಿ, ಅವನ ಶವವಾಗಲಿ ಕಾಣಲೇ ಇಲ್ಲ. ಹೇಳಿದ ಮಾತು ತಪ್ಪಿದ ಜಿತಕೇತುರಾಜನ ಕಡೆಗೆ



ನಮ್ಮ ರಾಜರು ಸೈನ್ಯದೊಂದಿಗೆ ಹೊರಟು ಬಂದಿದ್ದಾರೆ. ಎಚ್ಚರವಿಟ್ಟು ಮಾತಾಡಬೇಕು!" ಎಂದರು ಆ ಸವಾರರು.

"ಹಾಗಿದ್ದರೆ ಆ ಸಮಾಚಾರವನ್ನೆಲ್ಲ ನಮ್ಮ ಹತ್ತಿರ ಹೇಳುದ ಅಗತ್ಯವೇನು ಬಂತು? ಸರಿ, ಬೊಗಳಿ ಯಾಯಿತಷ್ಟೇ, ಇನ್ನು ನಿಮ್ಮ ದಾರಿ ಹಿಡಿದು ತೊಲಗಿರಾಚೆ!" ಎಂದು ಕರಡಿಕೆಂಗಣ್ಣ ಕೋಪದಿಂದ ಹೇಳಿದನು.

ಅಷ್ಟರಲ್ಲಿ ದುರ್ಮುಖರಾಜನ ಅಶ್ವಿಕರಲ್ಲೊಬ್ಬನು ಕಟುಕ ನಾಯಕನನ್ನು ನೋಡಿ, "ಅರೆ, ಇಲ್ಲಿರುವೆಯಾ? ನಿನ ಗುರುತು ಥಕ್ಕನೆ ಸಿಗಲಿಲ್ಲ. ನೀನು ಶಿರೀಷವನದಲ್ಲಿರುವ ಜಿತಕೇತುರಾಜನ ಪ್ರಧಾನ ಕಟುಕನಲ್ಲವೇನು?" ಎಂದು ಹೇಳಿ, ಅವನಿಗೆ ಗೇಲಿ ಮಾಡುವವನಂತೆ ಕಿಟಕಿಟನೆ ನಕ್ಕನು.

ಈ ಮೊದಲೇ ತಾನು ನಾಲ್ಕು ಮಂದಿಯ ಮುಂದೆ ನಗೆಗೀಡಾದಂತೆ ನೊಂದುಕೊಂಡಿದ್ದ ಕಟುಕನು ಹಲ್ಲು ಕಡಿಯುತ್ತ, ತನ್ನ ಚಪಗೊಡಲಿಯನ್ನು ಮೇಲೆತ್ತಿ "ಎಲೋ ಸೊಕ್ಕಿದ ಶತ್ರುಬಂಟಾ! ನಾನು ಯಾರೆಂದು ಗೊತ್ತಾಗಿಯೂ, ಗೊತ್ತಾಗದವನಂತೆ ವೇಷ ಕಟ್ಟಿ ಹಲ್ಲು ತೋರಿಸುವಿಯಾ? ಆಕೋ, ಅಲ್ಲಿ ಕುದುರೆಯ ಮೇಲಿರುವ ಹಿಮ್ಮೊಗದ ಶವವನ್ನು ನೋಡು! ನಿನಗೂ ಅದೇ ಗತಿ ಬೇಕೇನು?" ಎಂದನು.

ಕಟುಕನ ಶೌರ್ಯದ ಮಾತು ಕೇಳಿ ಕಾಳೀವರ್ಮನಿಗೆ ಉತ್ಸಾಹವೆದ್ದಿತು. ಅವನು ತನ್ನ ಕುದುರೆಯನ್ನು ಕಟುಕನಾಯಕನಬಳಿಗೆ ಓಡಿಸಿ, ಕತ್ತಿಯಿಂದ ಅವನ ಭುಜ ತಟ್ಟಿ, "ಭಲೇ ಭಲೆ! ನಾಯಿ ಬೊಗಳಿದರೆ ಬಲವಾದ ದೊಣ್ಣೆ ಎತ್ತಬೇಕಂತೆ! ಸರಿಯಾಗಿ ಹೇಳಿದಿ! ಹತ್ತರೊಟ್ಟಿಗೆ ಹನ್ನೊಂದಾಗಿ ಇವರಿಬ್ಬರ ತಲೆಗಳನ್ನೂ ಕಡಿದುಬಿಡುವೆಯೇನು? ಕಡಿ ಕಡಿ!" ಎಂದನು.

"ಎಲ್ಲವೂ ಕರಡಿಕೆಂಗಣ್ಣ ಮಹಾ ಮಾಂತ್ರಿಕರ ದಯೆ! ಅವರ ಆಜ್ಞೆಯಾದರೆ ಆ ಕೆಲಸ ಕೂಡಾ ಮಾಡಿಬಿಡುತ್ತೇನೆ. ಇತ್ತೀಚೆಗೆ ಒಂದೆರಡು ವಾರಗಳಿಂದ ನನ್ನ ಕೊಡಲಿಗೆ ನೆತ್ತರಿನ ಪಸೆಯೇ ಸಿಕ್ಕಿಲ್ಲ!" ಎಂದನು.

ಆಗ ದುರ್ಮುಖರಾಜನ ಅಶ್ವಿಕಭಟರಲ್ಲೊಬ್ಬನು ಕುದುರೆಯನ್ನು ತಟ್ಟಿ ಗಟ್ಟಿಯಾಗಿ ಕೂಗಿ "ಓಹೋ! ಇವರಾರೋ ನರಮಾಂಸ ಭಕ್ಷಕರು! ಮನುಷ್ಯನನ್ನು ಕೊಂದು ಕುತ್ತಿಗೆ ತಿರುಗಿಸಿ, ಕುದುರೆಯ ಮೇಲಿಟ್ಟು ನಗರಕ್ಕೆ ತೆಗೆದುಕೊಂಡು ಹೋಗುವುದೆಂದರೇನು? ಇಂಥಾ ಆಟ ನರಭಕ್ಷಕರದೇ!" ಎಂದನು.

ಕರಡಿಕೆಂಗಣ್ಣನು "ಛೀ ಛೀ!" ಎಂದು ಛೀತ್ಕರಿಸಿ, ಆ ಕುದುರೇ ಸವಾರರನ್ನು ಕಾಳೀವರ್ಮನಿಗೆ ತೋರಿಸುತ್ತ "ಕಾಳೀವರ್ಮ! ಈ ನಾಯಿಗಳ ಬೊಗಳುವಿಕೆಯನ್ನು ಇನ್ನೆಷ್ಟು ಹೊತ್ತು ಸಹಿಸುವುದು? ನನ್ನ ತಾಳ್ಮೆ ತಪ್ಪಿಹೋಗುತ್ತಿದೆ!" ಎಂದು ಗರ್ಜಿಸಿದನು. ಒಡನೇ ಕಾಳೀವರ್ಮನು, "ಎಲವೋ ದುರ್ಮು

ಖಿನ ದುಷ್ಟಬಂಟರೇ, ನೀವು ಮಾತಾಡದೆ ನಿಮ್ಮ ದಾರಿ ಹಿಡಿದು ಹೋಗುವಿರಾ, ತಲೆಗಳನ್ನು ಕಡಿಸಿಕೊಳ್ಳುವಿರಾ ?" ಎಂದು ಗರ್ಜಿಸಿ ಕೇಳಿದನು,

ಕಾಳೀವರ್ಮನ ವೀರಾವೇಶವನ್ನು ನೋಡಿ, ಜೀವಗುಪ್ತನೊಂದಿಗೆ ಬಂದಿದ್ದ ಅಶ್ವಿಕ ಭಟರಿಗೂ ಆವೇಶ ಬಂತು. ಅವರು ಢಾಲು ಮೇಲೆತ್ತಿ ಕತ್ತಿ ಹಿರಿದು, ತಮ್ಮ ಕುದುರೆಗಳನ್ನು ಆ ಸವಾರರ ಕಡೆಗೆ ಹಾರಿಸುತ್ತ, "ಇವರಿಬ್ಬರ ಸಮಾಚಾರ ನಮಗೆ ಬಿಡಿ! ಈ ಸೊಕ್ಕು ಹಿಡಿದವರು ತುಂಬ ಅವಮಾನವಾಗಿ ಬೊಗಳುತ್ತಾರೆ! ಪೂರಾ ನಿಲ್ಲಿಸಿಬಿಡುತ್ತೇವೆ" ಎನ್ನುತ್ತ ಅವರ ಮೇಲೆ ಬಿದ್ದರು.



ದುರ್ಮುಖಿನ ಅಶ್ವಿಕರು ಕೂಡಾ ಕತ್ತಿ ಹಿರಿದು ಆತ್ಮರಕ್ಷಣೆ ಮಾಡಿಕೊಳ್ಳುತ್ತ, ತಪ್ಪಿಸಿಕೊಂಡು ಓಡುತ್ತ, "ನೀವೆಲ್ಲರೂ ತಕ್ಕ ಫಲ ಅನುಭವಿಸುವಿರಿ! ಎಚ್ಚರವಾಗಿರಿ! ದುರ್ಮುಖ ಮಹಾರಾಜರು ಸಮೀಪದಲ್ಲೇ ಮಾವಿನ ತೋಪಿನಲ್ಲಿ ಬೀಡು ಬಿಟ್ಟಿದ್ದಾರೆ. ಈ ಕ್ಷಣವೇ ಬಂದು ನಿಮ್ಮೆಲ್ಲರನ್ನೂ ಚಿತ್ರವಧೆ ಮಾಡುತ್ತಾರೆ! ನೋಡುತ್ತಿರಿ!" ಎಂದು ಕೂಗಿ ಕೂಗಿ ಹೇಳಿದರು.

ಜೀವಗುಪ್ತನ ವೀರಭಟರಿಬ್ಬರೂ ಆ ಶತ್ರುಗಳನ್ನು ಬಹುದೂರದವರೆಗೆ ಓಡಿಸಿಕೊಂಡುಹೋದರು. ಕಡೆಗೆ ಅವರು ತಮ್ಮ ಕತ್ತಿಯ ಪೆಟ್ಟಿಗೆ ಸಿಕ್ಕುವುದಿಲ್ಲವೆಂದಾದ ಮೇಲೆ, ಅಷ್ಟಕ್ಕೇ ಬಿಟ್ಟು ಹಿಂದಿರುಗಿ ಬಂದರು.

ಅಷ್ಟರಲ್ಲಿ ಜೀವಗುಪ್ತನ ಭಟರಲ್ಲಿ ಒಬ್ಬನು, ಒಂದು ಕಡೆಗೆ ಕಣ್ಣಿಟ್ಟು ನೋಡಿ, ಬೇಗಬೇಗನೆ ಬರುತ್ತ ದೊಡ್ಡ ಸ್ವರದಿಂದ, "ಅಯ್ಯಾ, ಅತ್ತ ಕಡೆಯಿಂದ ಹತ್ತುಮಂದಿ ಶತ್ರುವಿನ ಕಡೆಯ ಕುದುರೇ ಸವಾರರು ನಮ್ಮ ಕಡೆಗೇ ಬರುತ್ತಿದ್ದಾರೆ!" ಎಂದು ಕೂಗಿದನು.

ನೋಡ ನೋಡುತ್ತಿದ್ದಂತೆ ಅವನು ಹೇಳಿದಂತೆಯೇ ಹತ್ತುಮಂದಿ ದುರ್ಮುಖಿನ ಕಡೆಯ ವೀರರು ಸಮೀಪಕ್ಕೆ ಬರುವುದು ಕಂಡಿತು. ಆದರೆ ಅವರು ಕತ್ತಿಗಳನ್ನು ಹಿರಿದು ಯುದ್ಧಕ್ಕೆ ಬರುವವರಂತೆ ಕಾಣಲಿಲ್ಲ. ಅವರೆಲ್ಲ ಸ್ವಲ್ಪ ದೂರದಲ್ಲೇ ಗಕ್ಕನೆ ನಿಂತುಬಿಟ್ಟರು.

ಜೀವಗುಪ್ತನೇ ಮೊದಲಾದವರು ಆಶ್ಚರ್ಯದಿಂದ ನೋಡುತ್ತಿರಲು, ಅವರಲ್ಲೊಬ್ಬನು ತನ್ನ ದುಸ್ತಿನೊಳಗಿಸಿಂದ ಉದ್ದವಾದ ಒಂದು ಪತ್ರವನ್ನು ಎತ್ತಿಕೊಂಡು ದೊಡ್ಡ ಸ್ವರದಿಂದ ಈ ರೀತಿಯಾಗಿ ಓದಿ ಹೇಳಿದನು:

"ಇದು ದುರ್ಮುಖ ಮಹಾರಾಜರ ಆಜ್ಞೆ! ಇಲ್ಲಿರುವವರೆಲ್ಲರೂ ಕೂಡಲೇ ನಮ್ಮೊಂದಿಗೆ ಹೊರಟು, ಮಾವಿನ ತೋಪಿನಲ್ಲಿ ತಂಗಿರುವ ದುರ್ಮುಖ ಮಹಾರಾಜರ ಬಳಿಗೆ ಬರತಕ್ಕದ್ದು. ತಪ್ಪಿದಲ್ಲಿ ಬಲವಂತಮಾಡಬೇಕಾಗುತ್ತದೆ!"

ಇದನ್ನು ಕೇಳಿ ಎಲ್ಲರೂ ಬೆರಗಾದರು. ಕರಡಿ ಕೆಂಗಣ್ಣನು ತಾನು ಕುಳಿತ ಕೋಣವನ್ನು ದುರ್ಮುಖಿನ

ಕಡೆಯುವರ ಬಳಿಗೆ ಕರೆದೊಯ್ಯುವಂತೆ ಮಂತ್ರಿ ಜೀವಗುಪ್ತನಿಗೆ ಹೇಳಿ, ದುರ್ಮುಖನ ಅಶ್ವಿಕರನ್ನು ನೋಡಿ, "ದುರ್ಮುಖರಂತಹ ಮಹಾಪ್ರಭುಗಳು ಆಜ್ಞೆ ಮಾಡಿದ್ದಾರೆಂದರೆ ಅದಕ್ಕೆ ಇದಿರಾವುದಿದ್ದೀತು? ಹೂಂ, ಅವರ ಮಾವಿನ ತೋಪಿಗೆ ಹೋಗೋಣ, ನಡೆಯಿರಿ" ಎಂದನು.

"ಇದೇನು ಗುರುಗಳೇ?" ಎಂದು ಕಾಳೀವರ್ಮನು ಆಶ್ಚರ್ಯದಿಂದ ಕೇಳಿದನು. "ನಿನ್ನ ಕಣ್ಣೆದಿರಿನಲ್ಲೇ ಎಲ್ಲವೂ ಗೊತ್ತಾಗುತ್ತದೆ. ಸುಮ್ಮನಿರು" ಎಂದ ಕರಡಿಕೆಂಗಣ್ಣ.

ದುರ್ಮುಖನ ಅಶ್ವಿಕಭಟರು ಅವರನ್ನೆಲ್ಲಾ ನೆಟ್ಟಗೆ ಮಾವಿನ ತೋಪಿಗೆ ಕರೆದುಕೊಂಡು ಹೋದರು.

ದುರ್ಮುಖರಾಜನು ಒಂದು ಎತ್ತರವಾದ ಆಸನದ ಮೇಲೆ ಕುಳಿತುಕೊಂಡಿದ್ದನು. ಅವನ ಎರಡು ಬದಿಗಳಲ್ಲಿ ಒಬ್ಬೊಬ್ಬರು ಬಿಚ್ಚುಗತ್ತಿಯ ವೀರರು ನಿಂತಿದ್ದರು. ಸ್ವಲ್ಪದೂರ ಮಂತ್ರಿಗಳೂ ಇತರ ಅಧಿಕಾರಿಗಳೂ ನಿಂತುಕೊಂಡಿದ್ದರು.

ಕರಡಿಕೆಂಗಣ್ಣನನ್ನೂ, ಅವನೊಂದಿಗಿದ್ದವರನ್ನೂ ನೋಡಿದ ಕೂಡಲೇ ದುರ್ಮುಖನು "ಬಂದಿರಾ ನನ್ನ ಮುಂದೆ? ಎಲೈ ದುಷ್ಟರೇ, ನಿಮ್ಮನ್ನು ಕುರಿತು ಸಕಲ ಸಮಾಚಾರವೂ ನನಗೆ ಗೊತ್ತಾಗಿದೆ. ನಿಮ್ಮನ್ನೆಲ್ಲಾ ಬದುಕಲು ಬಿಡುವುದೇ ತಪ್ಪು. ಈ ಕಟುಕನಾಯಕನಿಂದ ಹಿಡಿದು ನಿಮ್ಮೆಲ್ಲರ ತಲೆಗಳನೂ ಹಾರಿಸಿಬಿಡುತ್ತೇನೆ. ಕಟ್ಟಕಡೆಗೆ ಕಾಳೀವರ್ಮನ ತಲೆ!" ಎಂದನು ಹಲ್ಲು ಕಡಿಯುತ್ತ.

ದುರ್ಮುಖನ ಗರ್ಜನೆ ನಿಂತಕೂಡಲೇ, ಕರಡಿಕೆಂಗಣ್ಣನು ಗಡಗಡ ನಡುಗಿ "ಜೈ ಆದಿಭಲ್ಲೂಕಾ!" ಎಂದು ಗಟ್ಟಿಯಾಗಿ ಕೂಗಿ, ಕೋಣದ ಮೇಲಿನಿಂದ ಕೆಳಗೆ ಹಾರಿ, ಹೆದರಿ ನಡುಗುತ್ತಿದ್ದ ಕಟುಕನಾಯಕನನ್ನು ನೋಡಿ, "ಕೇಳಿದೆಯಾ? ಈಗ ಮೊದಲನೇ ಬಲಿ ನೀನೇ! ಈ ದುರ್ಮುಖನು ಹೇಳುತ್ತಾನೆ. ನಿನ್ನ ತಲೆಯನ್ನು ಈ ದುರ್ಮುಖನೇ ಕಡಿಯುತ್ತಾನೋ, ನೀನೇ ದುರ್ಮುಖನ ತಲೆ ಕಡಿಯುತ್ತೀಯೋ ಈ ಕ್ಷಣದಲ್ಲಿ ಗೊತ್ತಾಗಿಬಿಡುತ್ತದೆ! ಜೈ ಆದಿಭಲ್ಲೂಕಾ!" ಎನ್ನುತ್ತ ತನ್ನ ಮಂತ್ರದಂಡದ ಕರಡಿ ತಲೆಯಿಂದ ಅವನ ಬೆನ್ನನ್ನು ಸವರಿದನು.

ಮರುಕ್ಷಣದಲ್ಲಿ ಕಟುಕನಾಯಕನು ಕರ್ರಗಿನ ಕರಡಿಯಾಕಾರವನ್ನು ತಾಳಿ, ತನ್ನ ಚಪಗೊಡಲಿಯನ್ನು ಗಿರ್ರನೆ ತಿರುಗಿಸುತ್ತ ಕುದುರೆಯ ಮೇಲಿನಿಂದ ಕೆಳಗೆ ಧುಮುಕಿದನು. ಅವನ ಭೀತಿ ನಡುಕಗಳೆಲ್ಲ ಎಲ್ಲಿ ಹಾರಿಹೋದುವೋ ಏನೋ! ಅವನು ಧುಮುಕಿದ ರಭಸದಲ್ಲೇ ಯಾವುದೋ ಭೀಕರಮೃಗದಂತೆ ಕರ್ಣಕಠೋರವಾಗಿ ಗರ್ಜಿಸುತ್ತ ದುರ್ಮುಖರಾಜನ ಕಡೆಗೆ ಕುಪ್ಪಳಿಸಿಕೊಂಡು ಓಡಿದನು. (ಇನ್ನೂ ಇದೆ)

